CHANDRA-ಚಂದ್ರ

An Astrological Book in Kannada on Predictive Astrology Author M. Subrayan, Published by B. G. Acharya Gajanana Prakashana Mangalore-1

P.P-136+iv



ಬೆಲೆ. ರೂ 8-00

ಪ್ರಥಮ ಮುದ್ರಣ 1983

ಪ್ರಕಾಶಕರು:- ಗಜಾನನ ಪ್ರಕಾಶನ
ಗಣಪತಿ ಹೈಸ್ಕೂಲ್ ಕ್ರೋಸ್‌ರೋಡ್, ಮಂಗಳೂರು-೧

ಮುದ್ರಕರು:- ಕಾಮಧೇನು ಪ್ರಿಂಟರ್ಸ್
ಮಂಗಳೂರು-೧

# ವಿಜ್ಞಪ್ತಿ

ಸುಬೋಧ ಜ್ಯೋತಿಷ ಚಂದ್ರ. ಈ ಪುಸ್ತಕದ ಲೇಖನಗಳು "ಪ್ರಭಾತ" ವಾರ ಪತ್ರಿಕೆಯಲ್ಲಿ ಬಂದಿವೆ. ಎರಡು ಮೂರು ದಶಕಗಳ ಹಿಂದೆ ಸೂರ್ಯಾದಿಗ್ರಹರನ್ನು ಕುರಿತು ಫಲೋಪದೇಶದ ವಿಷಯದಲ್ಲಿ ಪ್ರಾಚೀನ ಆಚಾರ್ಯ ಪುರುಷರ ಉಕ್ತಿಗಳನ್ನು ಉದ್ಧರಿಸಿ ಗೋಲಪರಿಚಯದಿಂದ ಆರಂಭಗೊಂಡು ಬರೆದವು. ಈ ಚಂದ್ರ ಕೇವಲ ಪುಸ್ತಕ ರೂಪ. ಇದು ಗೋಲಪರಿಚಯ, ಕಾರಕತ್ವ, ಅನ್ಯಫಲ ಭೇದ, ರಾಶಿಗುಣಶೀಲ, ತನ್ವಾದಿದ್ವಾದಶ ಫಲ, ರಾಶಿ, ನಕ್ಷತ್ರ ತಿಥಿ ಸಂಧಿದೋಷ, ದಶಾಫಲ ವಿಭಾಗಗೊಂಡಿದೆ.

ಜ್ಯೋತಿಷ ಶಾಸ್ತ್ರ ಗ್ರಂಥ-ಗಣಿತ, ಸಂಹಿತಾ, ಹೋರಾ, ಎಂಬಸ್ಕಂದ ತ್ರಯಾತ್ಮಕವಾಗಿ ವಿಪುಲವಾಗಿದೆ. ಇದು ಹೋರಾಸ್ಕಂದದಿಂದ ಉದ್ಧೃತ. ಬುದ್ಧಿ ಶಿಖರ ಪವಿತ್ರತೆಗಾಗಿ ಈ ಕೆಲಸ ನಡೆದಿದೆ. ಪ್ರಾಜ್ಞರು ದುರುಕ್ತಿಗಳಿದ್ದರೆ ಕ್ಷಮಿಸಬೇಕು. ಅನಸೂಯಾಭಾವನೆ ತುಂಬಿ ಮುನ್ನಡೆವಾಗ ಬಂದ ಸ್ಖಲನ ತನ್ನವನದೆಂದು ಸ್ವೀಕರಿಸುವರೆಂದೇ ಎಣಿಕೆಗೊಳ್ಳುವೆ. ತಿಳಿಸಿದಲ್ಲಿ ಅವಿವೇಕ ತನದ ಜಾಡ್ಯ ಹೋಗಲಾಡಿಸುವೆ.

ವಾಗ್ದೇವಿ, ಗುರುಜನ, ಆಚಾರ್ಯ ಪುರುಷರಿಗೂ ಈ ಶಾಸ್ತ್ರದ ಮುನಿ ಮಹಾಕಲ್ಪರುಗಳಿಗೂ ಪ್ರಸಾದಾನುಗ್ರಹ ಪ್ರಾಪ್ತಿಗಾಗಿ ಪ್ರಣಮಿಸುವ ಕರ್ತವ್ಯ ಕರ್ಮವನ್ನು ಮರೆಯದಿರುವೆನು.

"ಗಜಾನನ ಪ್ರಕಾಶನ" ಕಾಮಧೇನು ಪ್ರಿಂಟರ್ಸ್ ಮಂಗಳೂರು ಇದರ ಪ್ರಚಾಲಕರು ಈ ಪುಸ್ತಕ ರೂಪದಲ್ಲಿ ಹೊರತರುವುದಕ್ಕೆ ಮುಂಬಂದುದು ಭಾಷಾಭಿಮಾನಿಗಳಿಗೆ ಸಾಹಿತ್ಯಭಂಡಾರದ ಬಳವಣಿಗೆಯ "ಅಳಿಲ ಮಳಲ ಸೇವೆ" ಆಗಿದ್ದರೂ ಮಹತ್ವದ್ದಾಗಿಯೇ ಪ್ರಶಂಸಾಪಾತ್ರವಾಗಿರುವುದು. "ಬಂಜೆ ಅರಿವಳೇ ಹೆರಿಗೆಯ ಒಡಲದುಗುಡ ಬೇನೆ" ಎಂಬಂತೆ ಇಂದಿನ ವಸ್ತು ಮೌಲ್ಯ ನೆಲೆಯಿದೆ ಎಂಬುದನ್ನು ಬಲ್ಲವರು ತಿಳಿದೇ ಇರುವರು. ಆದ್ದರಿಂದ ಈ ಜ್ಞಾನಯಜ್ಞ ಕಾರ್ಯಕ್ಕೆ ಸಹಕಾರ ಧರ್ಮಾನುಷ್ಠಾನನಾಗಿರುವೆನು. ಮಾತ್ರನಲ್ಲದೆ ಲಕ್ಷ್ಮೀರಮಣನಾದ ದೇವರು ಪ್ರಸನ್ನತೆಯ ಮುಖ ಚಂದ್ರನ ಬೆಳ್ದಿಂಗಳ ಮುಗುಳುನಗೆಗೊಂಡು ಕರುಣಾಮೃತದ ಧಾರೆಯನ್ನು ಎರೆದು ಬಳವಣಿಗೆಯ ಉತ್ತರೋತ್ತರ ಚಿರಸ್ಥಿರ ಸಂಪತ್ತು ದೀರ್ಘಾ

ಯುಂಃ ರೋಗ್ಯದಾತಾರಮಪ್ಪಂತೆ ಒಡಲನ್ನು ಮಡಗಿಮಣಿವ ಭಕ್ತನ ಬೇಡಿಕೆಯನ್ನು ಪೂರಯಿಸಲಿ. ಈ ಮುದ್ರಣದ ಕೆಲಸಕ್ಕೆ ನೆರವಾದ ಎಲ್ಲ ಶ್ರಮಜೀವನದ ಬಂಧು ಬಳಗದವರ ಉಪಕೃತಿಗೆ ಕೃತಜ್ಞನೂ ಆತ್ಮೀಯಾಭಿಮಾನಪೂರ್ಣನೂ ಆಗಿರುವ ಮನಸ್ಸನ್ನು ಚಿಗುರಿಸಿರುವೆ. ಈ ಒಪ್ಪುವಿಕೆಯು ನುಡಿಯೀವ ಜ್ಯೋತಿಷಶಾಸ್ತ್ರಾದೀತಿ ಭಕ್ತ ಜನರ ಊಳಿಗದವ.

ತಾ. 22-9 83 ಎಮ್. ಸುಬ್ರಾಯನ್.

ವಿಷಯವಿಭಾಗ ಪುಟ.

# ಚಂದ್ರ

## 1 ಗೋಲ ಪರಿಚಯ

ದಧಿಶಂಖ ತುಷಾರಾಭಂ ಕ್ಷೀರೋದಾರ್ಣವಸಂಭವಮ್ ।
ನಮಾಮಿ ಶಶಿನಂ ಸೋಮಂ ಶಂಭೋರ್ಮುಕುಟಭೂಷಣಮ್ ॥

'ನಕ್ಷತ್ರಾಣಾಮಹಂ ಶಶೀ' (ಗೀತಾ-೧೦)

'ಚಂದ್ರಮಾ ಮನಸೋಜಾತಶ್ಚಕ್ಷೋಃ ಸೂರ್ಯಃ' (ಪುರುಷಸೂಕ್ತ)

ಮಾನವನು ಹಗಲು ದುಡಿದು ದಣಿಯುವನು. ಅಂತೆಯೇ ಪ್ರಪಂಚದ ಜೀವಸಮುದಾಯ ಸೂರ್ಯನ ತಾಪದಿಂದಲೂ ತನ್ನ ಜೀವನ ಸಂಗ್ರಾಮದ ಹೋರಾಟದಿಂದಲೂ ದಣಿದು ವಿಶ್ರಾಂತಿಯನ್ನು ಬಯಸಲಿಚ್ಛಿಸುತ್ತಿದೆ. ಪ್ರಕೃತಿಯೇ ವಿಶ್ರಮಿಸ ಹೊರಟಂತಿದ್ದ ಸಮಯ ಸೂರ್ಯನು ಗಗನಾಂಗಣದಿಂದ ಪಶ್ಚಿಮಕ್ಕಿಳಿಯೆ ನಭೋಭಾಗದಲ್ಲಿ ತಾರೆಗಳು ಒಂದೊಂದಾಗಿ ಮಿನುಗತೊಡಗುತ್ತವೆ. ಸೂರ್ಯಾಸ್ತಮಯಕ್ಕಿದಿರಾಗಿ ಪೂರ್ವ ದಿಕ್ಕಿನಲ್ಲಿ ಹುಣ್ಣಿಮೆಯ ಚಂದ್ರನು ನಮ್ಮ ಮನಸ್ಸನ್ನು ಸೆಳೆದು ಮೆಲ್ಲ ಮೆಲ್ಲನೆ ಮೇಲಕ್ಕೇರುವುದನ್ನು ನಾವು ಕಾಣುವೆವು. ಪ್ರಾಚೀನ ಕಾಲದಿಂದಲೂ ಮಾನವದೃಷ್ಟಿಯನ್ನು ಮರುಳುಗೊಳಿಸಿ ಮನಸ್ಸಿನ ಮೇಲೆ ವಿಶೇಷಾಧಿಕಾರವನ್ನು ತೋರಿದವನು ಚಂದ್ರನು. ಭೂದೇವಿಯ ಆಪ್ತಭೃತ್ಯನಂತೆ ಆಕೆಯ ಗತಿಯನ್ನೇ ಚಂದ್ರನು ಅನುಸರಿಸುತ್ತಿರುವನು. ಭೂದೇವಿಯ ಆಕರ್ಷಣದ ಅಚ್ಛೇದ್ಯವಾದ ಪ್ರೇಮಪಾಶಕ್ಕೆ ಕಟ್ಟುಬಿದ್ದು ಆಕೆಯ ಸುತ್ತಲೂ ಪಶ್ಚಿಮದಿಂದ ಪೂರ್ವಕ್ಕೆ ಒಂದು ತಿಂಗಳಲ್ಲಿ ಪರಿಕ್ರಮಿಸುತ್ತಿರುವನು. ಅಮಾವಾಸ್ಯೆಯಿಂದ ಆರಂಭಿಸಿ ಪ್ರತಿದಿನ ಸಾಯಂಕಾಲ ಚಂದ್ರನನ್ನು ನೋಡುತ್ತಾ ಬಂದರೆ ಹಿಂದಿನ ಸಂಜೆಗಿಂತ ಮುಂದಿನ ಸಂಜೆ ಪೂರ್ವ ದಿಕ್ಕಿನ ಕಡೆ ಸುಮಾರು $13\frac{1}{3}^\circ$, ಎಂದರೆ ಗಗನಮಂಡಲ ಪರಿಧಿಯಲ್ಲಿ $\frac{1}{27}$ನೆಯ ಭಾಗ ಮುಂದೆ ಹೋಗಿರುವುದು ಕಾಣುತ್ತದೆ. ಭೂಮಿಯ ಸುತ್ತಲೂ ಆತನ ಈ ರೀತಿಯ ಪರಿಕ್ರಮಣವೇ ಆತನ ಬೆಳೆಯುವಿಕೆಗೂ ಬಡತನವಾಗುವುದಕ್ಕೂ ಕಾರಣ. ಈ ಬೆಳೆಯುವಿಕೆ-ಬಡತನಗಳಾಗುವಿಕೆಯೇ ಕಲೆಗಳೆನಿಸುವುವು. ಇದರಿಂದಲೇ ಚಾಂದ್ರಮಾಸ ನಿರ್ಧಾರಿತವಾಗುವುದು.

ಪಾಶ್ಚಾತ್ಯರಲ್ಲಿ ಗೆಲಿಲಿಯೋ 1609 ರಲ್ಲಿ ದೂರದರ್ಶಕದಿಂದ ಅನೇಕ್ಷಣೆ ನಾಡಿ ಚಂದ್ರಬಿಂಬದಲ್ಲಿ ಮೈದೋರುವ ಕಳಂಕಗಳು ಏನೆಂದು ಪ್ರಯತ್ನ ಪಟ್ಟು, ಸಮುದ್ರಗಳಾಗಿರಬೇಕೆಂದು ನಿರ್ಣಯಗೊಂಡನು. ಏಕೆಂದರೆ-ಜಳ ಕನ್ನು ನೀರು ನೆಲದಷ್ಟು ಪ್ರತಿಬಿಂಬಿಸುವುದಿಲ್ಲವಷ್ಟೆ. ಚಂದ್ರನಿಗೆ ಸ್ವಪ್ರಕಾಶ ವಿಲ್ಲದ ಕಾರಣ ಸೂರ್ಯನು ಅವನ ಮೇಲೆ ಕರೆಯುವ ಕಿರಣವೃಷ್ಟಿಯಿಂದ ಅವನು ಬೆಳಗುತ್ತಾನೆ. ಭೂಮಿಯ ಸುತ್ತಲೂ ಅದು ಸುತ್ತುವುದರಿಂದ ಸೂರ್ಯ ಸಾಪೇಕ್ಷವಾದ ಸ್ಥಾನವೂ ಪ್ರತಿಕ್ಷಣವಲ್ಲಿಯೂ ಮಾರ್ಪಡುತ್ತಿ ರುತ್ತದೆ. ಆದುದರಿಂದಲೇ ಸೂರ್ಯನಿಂದ ಬೆಳಗುವ ಗೋಲಾರ್ಧವು ಹೆಚ್ಚು ಕಡಿಮೆಯಾಗಿ ನಮಗೆ ಕಾಣಲು ಅವಕಾಶವಾಗುತ್ತದೆ. ಚಂದ್ರನ ವೃದ್ಧಿಕ್ಷಯಗಳಿಗಿದೇ ಕಾರಣ.

ಭಾರತದಲ್ಲಿ ಆರ್ಯಭಟನು ಈ ಮೊದಲೇ ಸಿದ್ಧಾಂತಿಸಿರುವನು. ವರಾಹನು "ಚಂದ್ರನು ಜಲರೂಪನು. ಅವನಲ್ಲಿ ಬಿದ್ದ ಸೂರ್ಯಕಿರಣಗಳು ಮನೆಗಿರಿಸಿದ ಕನ್ನಡಿಯ ಮೂಲಕ ಬೆಳಕು ಪ್ರತಿಫಲಿಸುವಂತೆ ರಾತ್ರಿಯ ಕತ್ತಲೆಯನ್ನು ಹೋಗಲಾಡಿಸುವವೆಂದು" ತನ್ನ ಸಂಹಿತೆಯಲ್ಲಿ ಹೇಳಿರುವನು.

ತರಣಿಕಿರಣಸಂಗಾದೇಷ ಪೀಯೂಷಪಿಂಡೋ ದಿನಕರದಿಶಿ ಚಂದ್ರಶ್ಚಂದ್ರಿಕಾಭಿಶ್ಚಕಾಸ್ತಿ ।
ತದಿತರದಿಶಿಬಾಲಾಕುಂತಲಶ್ಯಾಮಲಶ್ರೀ ರ್ಘಟಇವ ನಿಜಮೂರ್ತಿಚ್ಛಾಯಯೈ-
ವಾತಾಪಸ್ಥಃ ।

ಸೂರ್ಯಾದಧಃಸ್ಥಸ್ಯ ವಿಧೋಽರಧಸ್ಥಮರ್ಧಂ ಸ್ವದೃಶ್ಯಂ ಸಕಲಾಸಿತಂ ಸ್ಯಾತ್ ।
ದರ್ಶೇಽಥಭಾರ್ಧಾಂತರಿತಸ್ಯ ಶುಕ್ಲಂ ತತ್ ಪೌರ್ಣಮಾಸ್ಯಾಂ ಪರಿವರ್ತನೇನ ॥ -ಭಾಸ್ಕರ

ಸಲಿಲಮಯೇ, ಶಶಿನಿ ರವೇರ್ದೀಧಿತಯೋ ಮೂರ್ಛಿತಾಸ್ತಮೋನೈಶಂ ।
ಕ್ಷಪಯಂತಿ, ದರ್ಪಣೋದರನಿಹಿತಾ ಇವ ಮಂದಿರಸ್ಯಾಂತಃ (ವರಾಹ)

ಚಂದ್ರೋ ಜಲಮಂಬೋಽರ್ಕೋಽಗ್ನಿಃ 'ಸ್ವತಃ ಪ್ರಕಾಶಶೂನ್ಯಶ್ಚಂದ್ರಃ ಸೂರ್ಯಾಂ-
ಶುಸ್ಪರ್ಶವಶಾತ್ ದೃಶ್ಯಮೂರ್ತಿಃ' (ಆರ್ಯಭಟಃ)

ಭಾಸ್ಕರಾಚಾರ್ಯನು ಇದನ್ನೇ ಹೇಳಿರುವನು.

ಸೂರ್ಯನ ಕಿರಣದ ಮೂಲಕವೇ ಚಂದ್ರನ ಪ್ರಕಾಶ. ಅಮಾವಾಸ್ಯೆಯ ಸಮಯ ಸೂರ್ಯನಿಗೂ ಭೂಮಿಗೂ ನಡುವೆ ಚಂದ್ರನಿರುವುದರಿಂದ (ಸಮರೇಖೆಯ ಮೇಲಲ್ಲ) ಸೂರ್ಯನ ಬೆಳಕಿದ ಚಂದ್ರ ಗೋಲಾರ್ಧವು ನಮ್ಮ

ಕಡೆ ತಿರುಗುವುದು. ಆಗ ಚಂದ್ರನು ಕಾಣುವುದಿಲ್ಲ. ಅಮಾವಾಸ್ಯೆ ಕಳೆದು ಎರಡು ದಿನಗಳಾಗಲೂ ತೆಳ್ಳಗೂ ಬಿಲ್ಲಿನಂತೆಯೂ ಇರುವ ಬಾಲಚಂದ್ರನು ಗಗನಾಂಗಣದಲ್ಲಿ ತನ್ನ ಪ್ರಭೆಯಿಂದ ಮೆರೆಯುವನು. ಮುಂದೆ ಕ್ರಮವಾಗಿ ಬಳೆಯುತ್ತ ತನ್ನ ದಾರಿಯಲ್ಲಿ ನಮಗೂ ಸೂರ್ಯನಿಗೂ ಸಮಕೋಣಕ್ಕೆ ಬರಲು ಚಂದ್ರಬಿಂಬದ ಅರ್ಧಭಾಗ ಮಾತ್ರ ನಮಗೆ ಕಾಣುತ್ತದೆ. ಆಗ ಶುಕ್ಲಪಕ್ಷದ ಅಷ್ಟಮಿ ಚಂದ್ರನಾಗುವನು. ಹುಣ್ಣಿಮೆಗೆ ಸರಿಯಾಗಿ ಚಂದ್ರನು ಸೂರ್ಯನಿಗಿದಿರಾಗಿ ಬರುವುದರಿಂದ ಚಂದ್ರನ ಪ್ರಕಾಶವಾದ ಗೋಲಾರ್ಧವು ಸಂಪೂರ್ಣವಾಗಿ ಕಾಣುತ್ತದೆ. ಅದೇ ಪೂರ್ಣಚಂದ್ರನು ಹುಣ್ಣಿಮೆ ಬಳಿಯಲು ಬಡವಾಗುತ್ತ ಬಂದು ಪ್ರಕಾಶ ಬಿಂಬದ ಒಂದು ಕಡೆ ಯಲ್ಲಿ ಮುಕ್ಕು ಕಾಣಿಸಿಕೊಂಡು ಭೂಮಿಗೂ ಸೂರ್ಯನಿಗೂ ಮತ್ತೊಂದು ದಾರಿ ಸಮಕೋಣದಲ್ಲಿ ನಿಂತು ಕೃಷ್ಣಪಕ್ಷ ಅಷ್ಟಮಿ ಚಂದ್ರನಾಗಿ ಬೆಳಗು ವನು. ಅಮಾವಾಸ್ಯೆಯಿಂದ ಹುಣ್ಣಿಮೆಗೆ ಹದಿನೈದು ದಿವಸಗಳು ಶುಕ್ಲ ಪಕ್ಷ; ಹುಣ್ಣಿಮೆಯಿಂದ ಅಮಾವಾಸ್ಯೆಯವರೆಗೆ ಹದಿನೈದು ದಿವಸಗಳು ಕೃಷ್ಣಪಕ್ಷ. ಸಂಸ್ಕೃತದಲ್ಲಿ ಪಕ್ಷವೆಂದರೆ ರೆಕ್ಕೆ ಎಂಬ ಅರ್ಥ. ಅಮಾವಾ ಸ್ಯೆಯಿಂದ ಮತ್ತೊಂದು ಅಮಾವಾಸ್ಯೆಗಾಗಲಿ, ಹುಣ್ಣಿಮೆಯಿಂದ ಮತ್ತೊಂ ಹುಣ್ಣಿಮೆಗಾಗಲಿ ಆಗುವ ಚಾಂದ್ರಮಾಸಕ್ಕೆ ಎರಡು ರೆಕ್ಕೆಗಳುಂಟೆಂದು ಭಾವಿಸಬಹುದು. ಒಂದು ಬೆಳೆಯುದು ಮತ್ತೊಂದು ಕರಿಯುದು. ಬೆಳೆ ಯುದು ವೃದ್ಧಿಯ ಗುರುತು ಕರಿಯುದು ಕ್ಷಯಕ್ಕೆ ಗುರುತು.

ಅಮಾವಾಸ್ಯೆ ಕಳೆದು ಚಂದ್ರನು ಬಿಲ್ಲಿನಂತಿರುವಾಗಾಗಲಿ, ಅಮಾ ವಾಸ್ಯೆಗೆ ಸ್ವಲ್ಪ ಮುಂಚೆಯಾಗಲಿ ಚಂದ್ರಬಿಂಬದ ಉಳಿದ ಭಾಗವು ಸ್ವಲ್ಪ ಮಂಕಾಗಿ ಬೂದು ಬೆಳಕುಳ್ಳದಾಗಿ ಕಾಣುತ್ತದೆ. ತನ್ನ ಮೇಲೆ ಬಿದ್ದ ಸೂರ್ಯ ರಶ್ಮಿಯನ್ನು ಭೂಮಿಯು ಗಗನಮುಖವಾಗಿ ಪ್ರತಿಬಿಂಬಿಸುವುದೇ ಅದಕ್ಕೆ ಕಾರಣ. ಚಂದ್ರನು ಬಿಂಬಿಸಿದ ನಮ್ಮ ಬೆಳಕೇ ಆ ಮಂದಕಾಂತಿ. ಅದು ಪ್ರತಿಛಾಯೆಯ ಪ್ರತಿಛಾಯೆಯು.

ಚಂದ್ರನು ಭೂಮಿಯ ಸುತ್ತಲೂ 27 ದಿನಗಳು 43 ನಿಮಿಷ 11 ಸೆಕೆಂಡುಗಳಲ್ಲಿ ಒಂದಾವೃತ್ತಿ ಸುತ್ತುತ್ತಾನೆ. ಇದೇ ನಕ್ಷತ್ರಗಳಾಗುವವು.

ಭೂಮಿಯೂ ಕೂಡಾ ಆ ಕಾಲದಲ್ಲಿ ಸೂರ್ಯನ ಸುತ್ತಲೂ ಸುತ್ತುತ್ತಿರುವುದರಿಂದ ಚಂದ್ರನು ತನ್ನ ಪಥದಲ್ಲಿ ತಾನು ಹೊರಟ ಸ್ಥಾನಕ್ಕೆ ಬಂದಾಗ ಸೂರ್ಯಸಾಪೇಕ್ಷಕ ಭೂಸ್ಥಾನವು ವ್ಯತ್ಯಸ್ತವಾಗಿರುವುದರಿಂದ ಅದು ಸೂರ್ಯನಿಗೂ ಭೂಮಿಗೂ ನಡುವೆ ತನ್ನ ಅಮಾವಾಸ್ಯೆಯ ಸ್ಥಳಕ್ಕೆ ಬರಲು ಇನ್ನು ಎರಡು ದಿವಸಗಳು ಹೆಚ್ಚಾಗುತ್ತವೆ. ಆದುದರಿಂದ ಚಾಂದ್ರಮಾಸದ ಕಾಲಾವಧಿಯು ನಾಕ್ಷತ್ರಿಕ ಪರಿಕ್ರಮಣ ಕಾಲಾವಧಿಗಿಂತಲೂ ಹೆಚ್ಚು; ಎಂದರೆ 29 ದಿನಸಗಳು 12 ಗಂಟೆಗಳು 44 ನಿಮಿಷಗಳು, 3 ಸೆಕೆಂಡುಗಳು ಇದೇ ಕ್ರಮಾಗತ ಚಂದ್ರಕಲೆಗಳ ಕಾಲಾವಧಿ.

ಚಂದ್ರನು ಭೂಮಿಗೆ 2,38,000 ಮೈಲು ದೂರದಲ್ಲಿದ್ದುಕೊಂಡು ತನ್ನ ಕಕ್ಷ್ಯೆಯಲ್ಲಿ 1 ಸೆಕೆಂಡಿಗೆ 0.6214 ಮೈಲಿನಂತೆ ಎಂದರೆ ಗಂಟೆಯೊಂದಕ್ಕೆ 2,235 ಮೈಲುಗಳಿಗೆ ಸ್ವಲ್ಪ ಹೆಚ್ಚಾದ ವೇಗದೊಡನೆ ಅಂತರಿಕ್ಷದಲ್ಲಿ ಪರ್ಯಟನ ಮಾಡುತ್ತಲಿರುವನು. ಭೂಮಿಯ ವೇಗ ಚಂದ್ರನ ವೇಗಕ್ಕಿಂತ 30 ಮಡಿ ಹೆಚ್ಚು

ಚಂದ್ರಗೋಲದ ವ್ಯಾಸ ಭೂಮಿಯ ವ್ಯಾಸದಲ್ಲಿ $\frac{273}{1000}$ರಷ್ಟು; ಅಂದರೆ 2,157 ಮೈಲುಗಳು ಅದರ ಹೊರಮೈ ವಿಸ್ತಾರವು ಒಂದೂವರೆ ಕೋಟಿ ಚದರ ಮೈಲುಗಳು. ಇದು ಪೃಥ್ವೀತಳದ ವಿಸ್ತಾರದ ಹದಿಮೂರರಲ್ಲೊಂದು ಭಾಗಕ್ಕೆ ಅಧಿಕವಾಗಿರುವುದು. ಭೂತಳದ ವಿಸ್ತಾರ 20 ಕೋಟಿ ಚದರ ಮೈಲುಗಳು.

ಚಂದ್ರನ ಗಾತ್ರ ಭೂಮಿಯದಕ್ಕಿಂತಲೂ 50ರಷ್ಟು ಕಡಿಮೆ. ಅದರ ತೂಕವು ಭೂಮಂಡಲ $\frac{1}{81}$ರಷ್ಟು ಮಾತ್ರವೆ ಚಂದ್ರನ ಸಾಂದ್ರತೆಯು ಭೂಮಿಯದರ 0.615ರಷ್ಟು ಎಂದರೆ ನೀರಿನದಕ್ಕಿಂತ ಮೂರು ಪಾಲಿಗೆ ಕೊಂಚ ಅಧಿಕ. ಭೂಮಿಯ ಮೇಲೆ ಒಂದು-ಮಣ ತೂಗುವ ವಸ್ತುವಿನ ತೂಕವು ಚಂದ್ರನ ಮೇಲೆ $\frac{174}{1000}$ ಮಣ ಮಾತ್ರ.

ನಮಗೂ ಚಂದ್ರನಿಗೂ ಇರುವ ದೂರವು 2,38,000 ಮೈಲುಗಳು. ಚಂದ್ರನ ವಿಚಾರದಲ್ಲಿ ನಮ್ಮ ಪೂರ್ವಜರು ನಡೆಸಿದ ಶೋಧನೆ ಹಿರಿದು. ನಡೆಯುತ್ತಿರುವ ಗ್ರಹಣಕಾಲ ನಿರ್ಣಯ ಮೊದಲಾದುವನ್ನು ನಮ್ಮ ಪೂರ್ವ

ಜರು ಮಾಡಿಕೊಟ್ಟ ಪಾಶ್ಚಾತ್ಯರಿಗಿಂತ ಗಣಿತದಲ್ಲಿ ಎಷ್ಟೋ ಮುಂದರಿದಿರುವರು. ಚಂದ್ರ ಗೋಲದಲ್ಲಿ ಏನೇನಿದೆ ಎಂಬುದನ್ನೂ ಊಹಿಸಿ ತಿಳಿದಿರುವರು. ಪಾಶ್ಚಾತ್ಯರ ಶೋಧನೆಯೂ ನಡೆಯುತ್ತಿದೆ. ಪರ್ವತಗಳಿವೆಯೆಂದೂ ಅವುಗಳಿಗೆ ಬೇರೆಬೇರೆ ಹೆಸರನ್ನು ಶೋಧಿಸಿಕೊಟ್ಟಿರುವರು.

ಚಂದ್ರನು ಆಕರ್ಷಕ ಗ್ರಹ. ಎಲ್ಲಾ ಜೀವರಾಶಿಗೂ ಇವನು ಉದಸಿದಾಗ ಮನಸ್ಸಿನಲ್ಲಿ ಮೂಡುವ ಕಾಮೇಚ್ಛೆ ಚಂದ್ರನ ಉದಯದ ಕಾಲ. ಜೀವರಾಶಿಯು ಹೊಂದುತ್ತಿರುವ ಭೋಗರಾಶಿಯು ಸುಖ, ಭೋಗಸಾಮಗ್ರಿಯು ಕೂಡಿಡುವಿಕೆ, ಸಂರಕ್ಷಣೆ ಮೊದಲಾದ ಕಾರ್ಯಗಳು ಚಂದ್ರನ ಉದಯಕಾಲದಲ್ಲೇ ನಡೆಯುತ್ತದೆ. ಕಳ್ಳರು ತಮ್ಮ ಕರ್ಮ ಸಾಧನೆಯನ್ನು ರಾತ್ರಿಯೇ ಮಾಡುವರು. ಮನಸ್ಸಿನಲ್ಲಿ ಒಂದಲ್ಲ ಒಂದು ಬಗೆಯ ಕಾಮ ಚಿಂತೆ ಚಂದ್ರನಉದಯದಲ್ಲಿ ಉಂಟಾಗುತ್ತಿದ್ದು ಸೃಷ್ಟಿಯ ಮನೋಕಾರಕನು ಚಂದ್ರನು.

ಅಹಮಾದಿತ್ಯರೂಪೋಸ್ಮಿ ಚಂದ್ರ ತ್ವಾಂ ಸರ್ವಜಾಂಬ್ನತೇ ।
ಸಂಯೋಗೇನ ವಿಯೋಗೇನ ಜಗತ್ ಸ್ಥಾವರ ಜಂಗಮಂ ॥

(ಜಾತಕ ಪಾರಿಜಾತ 17 ಅಧ್ಯಾಯ, 3 ಪ.)

ಎಲೆ ಪಾರ್ವತಿ, ನಾನು ರವಿಸ್ವರೂಪನು. ನೀನು ಚಂದ್ರ ಸ್ವರೂಪೆ. ನನ್ನ ನಿನ್ನ ಸಂಯೋಗ ವಿಯೋಗಗಳಿಂದ ಸ್ಥಾವರ ಜಂಗಮಗಳ ಸೃಷ್ಟಿಯಾಗುತ್ತಿದೆ. ಎಂಬ ಈ ನುಡಿ ಸೂರ್ಯ-ಚಂದ್ರರನ್ನು ಕುರಿತು ಶೋಧನಾಪೂರ್ಣವಾದುದೇ ಆಗಿದ್ದು ಸೂರ್ಯ ಚಂದ್ರರಿಂದಲೇ ಜಗತ್ತಿನ ಸೃಷ್ಟಿಯಾಗಿರುವುದು.

ಚಂದ್ರನು ಮನೋಕಾರಕ ಗ್ರಹನು. ಈತನ ಪ್ರಭಾವ ಅನ್ಯಾದೃಶ. ಮಾನವನ ಶೀಲಗುಣ ಧರ್ಮಗಳು ಇವನ ಮೂಲಕವೇ ಉಂಟಾಗುತ್ತಿವೆ. ಈ ಗ್ರಹನು ಭಿನ್ನ ಭಿನ್ನ ನಕ್ಷತ್ರ ರಾಶಿಗಳನ್ನು ಹೊಂದಿದಾಗ ಮಾನವನಲ್ಲಿ ಕಂಡುಬರುತ್ತಿರುವ ಗುಣಶೀಲ ಧರ್ಮಗಳು ವಿಭಿನ್ನಗಳಾಗುತ್ತಿವೆ. ಪ್ರಕೃತಿಯ ಮೇಲೆ ಚಂದ್ರನು ಬೀರುತ್ತಿರುವ ಪ್ರಭಾವ ಎಂತಹುದೆಂಬುದನ್ನು ಸಾಗರದರ್ಶನದಿಂದ ತಿಳಿಯಬಹುದು. ಸಾಗರದಲ್ಲಿ ಏಳುತ್ತಿರುವ ತರಂಗ

ಗಳು ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಏಕ ರೀತಿಯಲ್ಲಿಲ್ಲ. ಏರಿಳಿತ ಕಂಡು ಬರುವುದು. ಚಂದ್ರದರ್ಶನದಿಂದ ಸಾಗರ ಉಕ್ಕೇರುವುದನ್ನು ಕವಿಗಳು ವರ್ಣಿಸಿರುವರು.

ಈ ಕ್ರಮದಂತೆಯೇ ಪ್ರಕೃತಿಯಲ್ಲಿ ಸೇರಿದ ಮನುಷ್ಯನಲ್ಲಿ ಕಾಣಬರುತ್ತಿರುವ ವಿಕಾರಗಳು ಚಂದ್ರನ ಮೂಲಕವೇ ಆಗಿರುವುವು. ಸೃಷ್ಟಿಯ ವಸ್ತುಗಳ ಮೇಲೆ ಚಂದ್ರನಿಗಿರುವಷ್ಟು ಶಕ್ತಿ ಅನ್ಯರಿಗಿರುವುದಿಲ್ಲ. ಇವನು ಸೇರಿದ ನಕ್ಷತ್ರಗಳನ್ನು ಹೊಂದಿ ಬೀಜ ವಾಪ ಕೃಷಿ ಕರ್ಮಾದಿಗಳನ್ನು ಚಿಂತಿಸಬೇಕಿದೆ. ಯಾವ ನಕ್ಷತ್ರಗಳಲ್ಲಿ ಮೂಲ, ರಸಾದಿ, ಕೃಷಿ ಕರ್ಮವನ್ನು ಕೈಯಬಹುದೆಂದು ಮುಹೂರ್ತ ಗ್ರಂಥಗಳಲ್ಲಿ ಹೇಳಿರುವರು ಅಂತೆಯೇ ಮಾನವನು ತನ್ನ ಕರ್ಮದಿಂದ ಅನುಭವಿಸುವ ಸುಖ ದುಃಖಗಳಿಗೆ ಆವ ಆವ ನಕ್ಷತ್ರಗಳು ಹೇತುಗಳೆಂಬುದನ್ನು ಮುಹೂರ್ತಕಾರರು ವಿಸ್ತಾರವಾಗಿ ವರ್ಣಿಸಿರುವರು.

ನಾವು ಮಾಡತಕ್ಕ ಹಲವಾರು ಕೆಲಸಗಳಿರುತ್ತವೆ. ಆ ಕೆಲಸಗಳಿಗೆಲ್ಲಾ ಮನೋಕಾರಕ ಗ್ರಹನಾದ ಚಂದ್ರನ ನಕ್ಷತ್ರಸ್ಥಿತಿ ಜ್ಞಾನವೇ ಮುಖ್ಯ. ಚಂದ್ರನು ಆಶ್ರಯಿಸಿರುವ ರಾಶಿ, ನಕ್ಷತ್ರಗಳ, ಫಲರೂಪವಾಗಿಯೇ ನಾವು ಮಾಡಿದ ಕರ್ಮ ಫಲಗಳುಂಟಾಗುವುವು. ಮನಸ್ಸು ಯಾವುದಕ್ಕೂ ಮುಖ್ಯ. ಬೀಜರೂಪವಾದ ಮನಸ್ಸಿನ ಶಕ್ತಿ ಪ್ರೇರಣೆಯಿಂದಲೇ ನಾವು ಮಾಡುತ್ತಿರುವ ಕರ್ಮ ಫಲಗಳು ಸಿದ್ಧಿಸುತ್ತಿರುವವು. ಈ ಒಂದು ತತ್ವಾನುಸಂಧಾನವೇ ಚಂದ್ರನಲ್ಲಿ.

ಚಂದ್ರನು ಭೂಮಿಯ ಆಪ್ತಭೃತ್ಯನಂತೆ ಆಕೆಯ ಬಳಿಯಲ್ಲಿಯೇ ಸುತ್ತುವ ಗ್ರಹನಿದ್ದು ಜನರು ಇವನಿಂದ ಹೊಂದುವ ಸಹಾಯ ಕಡಿಮೆಯಲ್ಲ ಈ ಭೃತ್ಯನು ಭೂಮಿಯ ಮೇಲಿನ ಎಲ್ಲಾ ವಸ್ತು ಜೀವಿಗಳ ಮೇಲೂ ತನ್ನ ಶಕ್ತಿಯನ್ನು ಸದಾ ಹರಡಿರುವನು. ಇದರಿಂದಲೇ ನಮ್ಮ ಜೀವನ ಯಾತ್ರೆಯಲ್ಲಿ ಪಲವು ಬಗೆಯ ವಿಶೇಷ ಶಕ್ತಿಗಳು ಕಂಡುಬರುತ್ತವೆ.

ಚಂದ್ರನು ಆಶ್ರಯಿಸಿರುವ ನಕ್ಷತ್ರವೇ ಮನುಷ್ಯನ ಜನ್ಮ ನಕ್ಷತ್ರ. ಹುಟ್ಟಿದ ಸಮಯದಲ್ಲಿ ಚಂದ್ರನು ಆಶ್ರಯಿಸಿರುವ ನಕ್ಷತ್ರ ಮತ್ತು ರಾಶಿಗಳು

ಅವನ ನಕ್ಷತ್ರ ಮತ್ತು ರಾಶಿಗಳೆನಿಸುತ್ತವೆ. ನಕ್ಷತ್ರಗಳಿಂದ ಒಂದು ಬಗೆಯ ಫಲ. ರಾಶಿಯಿಂದ ಇನ್ನೊಂದು ಬಗೆಯ ಫಲ. ಈತನ ವೇಳಾ, ಅವಸ್ಥೆಗಳಿಂದ ಬೇರೆ ಫಲ ಕಂಡುಬರುತ್ತಿರುವುವು. ಈ ಮನೋಕಾರಕನು ಕ್ಷಣಿಕ ಗ್ರಹನು. ಈತನ ವೇಗ ಅಂತಹದು.

ಮನುಷ್ಯರ ಮನಸ್ಸು ವಿಭಿನ್ನವಾಗಿರುವುದು. ಒಂದೇ ವ್ಯಕ್ತಿಯ ಮನಸ್ಸು ಕಾಲ ಕಾಲ ಬದಲುಗೊಂಡು ವಿಭಿನ್ನವಾಗಿ ಕಾಣುವುದು. ಬಾಲ್ಯ ಕೌಮಾರ್ಯ, ಯೌವನ ವಾರ್ಧಕ್ಯಗಳಲ್ಲಿ ತೋರಿಬರುತ್ತಿರುವ ಮನಸ್ಸಿನ ಅಂತರ ಮಹತ್ತಾದುದು. ನೋವು, ದಯೆ, ಸಹಾನುಭೂತಿ ಅನುಕಂಪ ಮೊದಲಾದವು ಮನಸ್ಸಿನ ಭಿನ್ನ ಭಿನ್ನ ಕ್ರಮ ವೈಶಿಷ್ಟ್ಯಗಳು. ಅಹಿಂಸೆ, ದಯೆ, ಕರುಣೆ, ಉಪಕಾರಬುದ್ಧಿ, ಇವೆಲ್ಲಾ ಮಾನವನ ಹೃದಯ ಪಟಲದಲ್ಲಿರುವ ವಸ್ತುಗಳಾದರೂ ಮನಸ್ಸಿನ ಪ್ರಚೋದನಾ ಫಲಗಳೆನ್ನಲು ಯಾರೂ ಹಿಂಜರಿಯಲಾರರು.

ಅಶೋಕನು ಕಳಿಂಗ ಯುದ್ಧಭೂಮಿಗೆ ಹೋಗುವಾಗ ಇದ್ದ ಮನಸ್ಸು ಆಮೇಲೆ ಯುದ್ಧಾನಂತರ ಉಂಟಾದ ಮನಸ್ಸು ಒಂದೇ ಆಗಿ ಕಂಡುಬರುವುದಿಲ್ಲ. ಇಂತೆಯೇ ಮಾನವನು ಮನೋಕಾರಕನಾದ ಚಂದ್ರನ ಪ್ರಭಾವದಿಂದ ಆತ್ಮದಲ್ಲಿ ಹೊಂದುತ್ತಿರುವ ಬದಲಾವಣೆಯೇ ಬೇರೆ. ಮನಸ್ಸು ಶುದ್ಧವಾಗಿರದೇ ಮಾಡಿದ ಯಾವ ಕೆಲಸವೂ ಹಿತಕರವಲ್ಲ. ಚಂದ್ರನ ಶಕ್ತಿ ಇದು. ಈ ವಿಚಾರವನ್ನು ಅವನ ದಶಾಸಂಪರ್ಕದಿಂದ ನಿರ್ಣಯಿಸುವೆವು. ನಕ್ಷತ್ರದಿಂದ ದಶೆಯನ್ನು ಕಂಡುಹಿಡಿದು ಭಿನ್ನಫಲವನ್ನು ಬೋಧಿಸುವೆವು. ಫಲಬೋಧನೆಗೆ ಚಂದ್ರನ ಸಹಾಯ ಮಹತ್ತಾದುದು.

ಯಾವ ಕೆಲಸವನ್ನು ಮಾಡುವುದಾದರೂ ಚಂದ್ರನೇ ಮೊತ್ತಮೊದಲು ನಮಗೆ ಬೇಕಾದ ಗ್ರಹ. ತಿಥಿ ಮೊದಲಾದವು ಸೂರ್ಯಸಾಪೇಕ್ಷವಾದರೂ ಚಂದ್ರನನ್ನು ಹೊಂದಿದ ಬಳಿಕವೇ ತಿಥಿ ನಿರ್ಣಯವಾಗುವುದು. ನಕ್ಷತ್ರ, ತಿಥಿ, ವಾರ, ಗಳಿಗೆ ಚಂದ್ರನ ಪ್ರಧಾನನಾಗುತ್ತಾನೆ. ರವಿಯಿಂದ ದಿನದ ಉದಯವಾಗುವುದಾದರೂ ರಾತ್ರಿ ಮುಗಿಯದೆ ವಾರ ಬದಲಾಗದು. ಈ ಕಾರಣದಿಂದ ಉದಯದಿಂದ ಉದಯದವರೆಗೆ ಸಾವನ ದಿನವೆಂದು ಹೇಳಿರು

ವರು. "ಉದಯಾದುದಯಾಂತಂ ಹಿ ಸಾವನದಿನಮುಚ್ಯತೇ" ಎಂದು ಈ ಈ ಕಾರಣದಿಂದಲೇ ಹೇಳಿರುವರು.

ಚಂದ್ರನಲ್ಲಿ ಒಂದು ಆಕರ್ಷಣಾಶಕ್ತಿ ಇರುವುದು. ಆಕರ್ಷಣಾಶಕ್ತಿಯಿಂದ ಜೀವಿಗಳ ಜೀವನದಲ್ಲಿ ಮಹತ್ತಾದ ಪರಿಣಾಮ ಸಿದ್ಧಿಯಾಗುವುದು. ಪ್ರಕೃತಿಯಲ್ಲೂ, ಜೀವಿಯಲ್ಲೂ ಇದ್ದೇ ಇದ್ದ ಮನಸ್ಸು, ಬುದ್ಧಿ, ದೇಹಗಳಲ್ಲಿ ಇವನ ಅನುಕೂಲ ಪ್ರತಿಕೂಲದ ಪರಿಣಾಮ ಫಲವನ್ನು ಕಾಣುವೆವು. ಇವನ್ನೇ ಜೋಯಿಸನು ಬೋಧಿಸುತ್ತಿರುವನು. ಇದೇ ಫಲಜ್ಯೋತಿಷ.

ಚಂದ್ರನ ಪರಿಣಾಮವನ್ನು Mrs. Bassic Leo ತನ್ನ "Planetary Influences" ಎಂಬ ಗ್ರಂಥದಲ್ಲಿ "Further we find the moon regulating the tides and also affecting vegetaion. Her periodical waxing and waning is a constant symbol of the ebb and flow of the great magnetic tides that are ever sweeping through the various planes of nature. She is the most complex of all symbols. Luner magnesim generates life, pereseerves it and destroys it psychically as well as physically" ಎಂದಿರುವನು.

ಪಾಶ್ಚಾತ್ಯರು ಚಂದ್ರನ ಕಾರ್ಯಶಕ್ತಿಗಳನ್ನು ಕಾಣುವ ಮೊದಲು ಭಾರತೀಯರು ಅನುಸಂಧಾನದಿಂದ ಅರಿತುಕೊಂಡಿರುವರು. ಈ ಅನುಸಂಧಾನ ಫಲವನ್ನೇ ಇನ್ನು ಮುಂದೆ ಕೊಡಲಾಗುವುದು.

## 2 ಕಾರಕತ್ವ

### ಚಿತ್ರವಿಂದು:

ಕಾರಕತ್ವದ ಚಿಂತನೆಯನ್ನು ಮಾಡುವಾಗ ಮನೋಕಾರಕನು ಚಂದ್ರನೆಂದು ಪ್ರಂಜರಾಜನು ಹೇಳಿರುವನು.

"ಮಾತೃ ಮನಃ ಪುಷ್ಟಿಗಂಧರಸೇಶ್ಸ್ವಗೋಧೂಮಕ್ಷಾರಕ ದ್ವಿಜಶಕ್ತಿ ಕಾರ್ಯ ಸಸ್ಯ ರಜತಾದಿಕಾರಕಶ್ಚಂದ್ರಃ" (ಪರಾಶರ)

ಚಂದ್ರನು ಮಾತೃಕಾರಕನು ಭೂಮಿಯು ಲಾಲನೆ ಪೋಷಣೆಗೆ ಚಂದ್ರನು ಕಾರಣವಾಗಿರುವನು. ಅದೂ ಅಲ್ಲದೆ ಭೂಮಿಯು ಜೀವನಶಕ್ತಿಯು ವಿಕಾಸಕಾರಕನು ಚಂದ್ರನು. ಇದರಿಂದಲೇ ಚಂದ್ರನು ಮಾತೃಕಾರಕನಾಗಿರುವನು.

ಮಾನವನ ಮನಸ್ಸು ಚಂದ್ರನಂತಿದ್ದು ಆತನ ಜೀವನದ ಸುಖದುಃಖಗಳು ಮನಸ್ಸನ್ನೇ ಅವಲಂಬಿಸಿವೆ. ಈ ಕಾರಣದಿಂದಲೇ ಮನೋಕಾರಕನೆಂದು ಇವನಿಗೆ ಹೇಳಿರುವರು.

ದೇಹದ ಪುಷ್ಟಿ (ಶಕ್ತಿ) ಯನ್ನು ಚಂದ್ರನು ಕೊಡುವನು. ಇವನಿಂದ ಆತನ ವೃದ್ಧಿ ಕ್ಷಯದಂತೆ ದೇಹಸ್ಥಿತಿಯು ಕಂಡುಬರುವುದು. ಶರೀರದ ವೃದ್ಧಿ ಕ್ಷಯಗಳು ಚಂದ್ರನಂತೆಯೇ ಇದ್ದು ಪುಷ್ಟಿಯ ವಿಚಾರವನ್ನು ಚಂದ್ರನಿಂದ ತಿಳಿಯಲಾಗಿದೆ. ರವಿ ಕುಜರಿಂದ ದೇಹದ ಅಧಿಕ ವಿಚಾರವನ್ನು ತಿಳಿಯಬೇಕಿದೆ. ದೇಹದ ಹೆಚ್ಚಿನ ವಿಷಯಾಂಶಗಳು ರವಿಕುಜರನ್ನು ಹೊಂದಿವೆ.

ಗಂಧ(ಪರಿಮಳ) ವಿಷಯವು ಚಂದ್ರನಿಂದ ತಿಳಿಯಬೇಕಿದೆ. ಹೂವಿನಲ್ಲಿ ಪರಿಮಳವಿರುವುದು. ಈ ಪರಿಮಳ ಹೂವಿನಲ್ಲಿ ಎಲ್ಲಿದೆಯೆಂದು ಹೇಳಲಾಗುವುದಿಲ್ಲ ಹೂವಲ್ಲಿ ವಾಸನೆ ಗುಪ್ತವಾಗಿರುವುದು. ಅಂತೆಯೇ ಯೋಗಾಭ್ಯಾಸಾದಿ ವಾಸನೆ ಮಾನವನಲ್ಲಿ ನಿಗೂಢವಾಗಿರುವುದು. ಇದನ್ನು ತಿಳಿಯಲು ಕಷ್ಟಸಾಧ್ಯ. ಇಂದ್ರಿಯಜನ್ಯ ವಾಸನೆ. ಮನೋವಾಸನೆ ಬೇರೆ. ಶಾಸ್ತ್ರಾಭ್ಯಾಸದಿಂದಲೇ ಇವನ್ನರಿಯಬೇಕು. ಹೂಗಳಲ್ಲಿ ಅಡಗಿರುವ ವಾಸನೆಯನ್ನು ವನಸ್ಪತಿ ಶಾಸ್ತ್ರಜ್ಞನು ಹೇಳಲೂ ನಿರ್ದೇಶಿಸಲೂ ಸಾಧ್ಯನಾಗಬಹುದು. ಮಾನವನು ವಾಸನೆಯನ್ನು ಮೂಗಿನ ಸಹಾಯದಿಂದ ತಿಳಿಯಲು ಶಕ್ತಿಯುಳ್ಳನಾಗುವನು. ವಾಸನೆ ಗಾಳಿಯ ಮೂಲಕ ಸಂಚರಿಸಿ ಮೂಗು ತಿಳಿಯುತ್ತಿದೆ. ಗಾಳಿ ವಾತಾವರಣದಿಂದುಂಟಾಗುವುದು. ವಾತಾವರಣವೇ ಮಾನವನ ವಾಸನಾಶಕ್ತಿಯನ್ನು ಬೆಳೆಸುತ್ತಿರುವುದು. ಚಂದ್ರನು ಹೂಗಳ

ಗಂಧ ಗ್ರಹನು. ಬಾಹ್ಯ ಗಂಧವನ್ನು ಶುಕ್ರನಿಂದ ಚಿಂತಿಸಬೇಕಿದೆ. ಚಂದ್ರನಿಂದ ಸುವಾಸನೆಯು ಉಂಟಾಗುತ್ತಿರುವುದು.

ಚಂದ್ರನು ರಸಕಾರಕನು ರಸಶಬ್ದಕ್ಕೆ ಪ್ರವಾಹಾರ್ಥವೊಂದು. ಜಲೀಯ ವಸ್ತುಗಳೂ ಪಾದರಸವೂ ಚಂದ್ರನಿಂದ ಚಿಂತಿಸಬೇಕೆಂದು ಅರ್ಥವಾಗುವುದು.

ಕಬ್ಬು(ಇಕ್ಷು) ಚಂದ್ರನಿಂದ ತಿಳಿಯಬೇಕಿದೆ. ಕಬ್ಬು ರಸವಸ್ತುವು. ಕಬ್ಬಿನರಸ ಮಧುರ. ಕಬ್ಬಿನರಸವನ್ನು ನಾವು ಹಾಗೆಯೇ ಹೊಂದಲಾರೆವು. ಅದನ್ನು ಹಿಂಡಿ ಯಾ ಜಗಿದು ಹೊಂದುವೆವು. ಅಂತೆಯೇ ನಾವು ಹೊಂದುತ್ತಿರುವ ಮಾದಕ ರಸಗಳು ರೂಪಾಂತರಗಳಾಗಿದ್ದು. ರೂಪಾಂತರ ರಸವಸ್ತುವನ್ನು ಚಂದ್ರನಿಂದ ತಿಳಿಯಬೇಕಿದೆ.

ಗೋಧೂಮ(ಗೋಧಿ)ವನ್ನು ಚಂದ್ರನಿಂದ ಹೇಳಬೇಕಿದೆ. ಗೋಧಿ ಪಿಷ್ಟಾಹಾರ. ಪಿಷ್ಟಾಹಾರವಾದ ಕಾರಣ ಈ ಕಾರಕತ್ವವನ್ನು ಕೊಡಲಾಗಿದೆ.

ಉಪ್ಪು(ಕ್ಷಾರ) ಚಂದ್ರನಿಂದ ಚಿಂತಿಸಬೇಕಿದೆ. ಚಂದ್ರನ ದರ್ಶನದಿಂದ ಸಾಗರದ ವೃದ್ಧಿಕ್ಷಯದ ತರಂಗೋತ್ಪತ್ತಿ. ಈ ಕಾರಣದಿಂದ ಈತನು ಕ್ಷಾರಕಾರಕನು. ನಾವು ಉಣ್ಣುವ ಉಪ್ಪು ಚಂದ್ರನ ಮೂಲಕ ಒದಗುವುದೆಂದು ಇದರಿಂದ ತಿಳಿಯಬೇಕಿದೆ. ಸಮುದ್ರದಲ್ಲಿ ಇದರ ಬೆಳವಣಿಗೆಗೆಚಂದ್ರನೇ ಕಾರಣನಾಗಿರುವನು.

ಪಕ್ಷಿ, ಎರಡು ಜನ್ಮಗೊಳ್ಳುವಿಕೆ, ಮಾತಾಂತರ(ದ್ವಿಜ) ಮೊದಲಾದವು ಚಂದ್ರನ ಮೂಲಕ. ಹಕ್ಕಿಗಳು ಮೊದಲು ಅಂಡರೂಪದಲ್ಲಿರುವವು. ಆಮೇಲೆ ಪಕ್ಷಿರೂಪಕ್ಕೆ ಬರುವವು. ಆದ್ದರಿಂದ ದ್ವಿಜ ಎಂಬ ಹೆಸರು ಅವಕ್ಕೆ ಒಪ್ಪುವುದು. ದ್ವಿಜ ಶಬ್ದಕ್ಕೆ ಬ್ರಾಹ್ಮಣನೆಂಬ ಅರ್ಥವೂ ಇದೆ.

ಬೀಜಶಕ್ತಿಕಾರ್ಯ ಚಂದ್ರನದು. ನಾವು ಬೆಳೆಯನ್ನು ಬೆಳೆಸಲು ನಕ್ಷತ್ರವನ್ನೂ ದಿನವನ್ನೂ ನೋಡುವೆವು. ಕೃಷಿ ಮತ್ತು ಔಷಧಾದಿ ವಸ್ತು, ಅವುಗಳ ಶಕ್ತಿ ಕಾರ್ಯಗಳನ್ನು ಚಂದ್ರನಿಂದ ತಿಳಿಯುತ್ತೇವೆ. ನಕ್ಷತ್ರ ಚಿಂತನೆ ಚಂದ್ರನಿಂದ ಈ ಕಾರಣದಿಂದ ಬೀಜಶಕ್ತಿ ಕಾರ್ಯಕಾರಕನು ಚಂದ್ರನು. ಸ್ತ್ರೀಯರ ಗರ್ಭದ ಉತ್ಪಾದನೆಗೆ ರಜಸ್ವಲೆಯಾಗುವುದೇ ಮುಖ್ಯಕಾರಣ.

ಸ್ತ್ರೀಯರಿಗೆ ಉಂಟಾಗುವ ರಜೋದರ್ಶನಕಾಲವನ್ನು ಚಂದ್ರನು ಸೂಚಿಸು ವನು. ಈ ವಿಚಾರವನ್ನು ವರಾಹನು "ಕುಜೇಂದು ಹೇತುಃ ಪ್ರತಿಮಾಸ ಮಾರ್ತವಂ" ಎಂದು ಹೇಳಿರುವನು. ಕುಜ ಚಂದ್ರರು ಸ್ತ್ರೀಯರ ಪ್ರತಿ ಮಾಸದ ಆರ್ತವ ಕ್ರಿಯೆಗೆ ಕಾರಣರೆಂದು ಈ ಮಾತಿನ ಸಾರ.

ಚಂದ್ರನು ಸಸ್ಯಕಾರಕನು. ಸಸ್ಯಗಳ ವೃದ್ಧಿ ಕ್ಷಯಗಳು ಇವನಿಂದಾ ಗುತ್ತವೆ. ವನಸ್ಪತಿ ಶಾಸ್ತ್ರಜ್ಞನು ಇದನ್ನು ಸರಿಯಾಗಿ ತಿಳಿದಿರುವನು. ನಾವು ಹಗಲು ನೋಡಿದ ಗಿಡವನ್ನು ಮರುದಿನ,ಪ್ರತಿದಿನಗಳಲ್ಲಿ ನೋಡಿದಾಗ ಸಸ್ಯ ಗಳ ಬೆಳವಣಿಗೆಗೆ ಚಂದ್ರನು ಹೇಗೆ ಕಾರಣನೆಂಬುದನ್ನು ತಿಳಿಯಬಹುದಾಗಿದೆ.

ರಜತಾದಿ (ಬೆಳ್ಳಿಯೇ ಮೊದಲಾದವು)ಗಳ ಕಾರಕನು ಚಂದ್ರನು. ಚಂದ್ರನು ಬೆಳ್ಳಿಯಂತೆ ಧವಲವರ್ಣನಾದ್ದರಿಂದ ಇದನ್ನು ಹೇಳಿರುವರೆಂದು ಕೆಲವರ ಮತ. ಲೋಹಗಳ ಉತ್ಪತ್ತಿಯು ಯಾವ ಯಾವ ರೀತಿಯಿಂದ ಉಂಟಾಗುತ್ತಿರುವುದೆಂದು ಭೂಗರ್ಭಶಾಸ್ತ್ರಜ್ಞನೂ, ರಾಸಾಯನಿಕ ಶಾಸ್ತ್ರ ಜ್ಞನೂ ನಿರ್ದೇಶಿಸಬಹುದಾಗಿದೆ. ಚಂದ್ರನು ಬೆಳ್ಳಿಯ ಹುಟ್ಟಿಗೆ ಕಾರಣ ನೆಂದು ನಮ್ಮ ಪ್ರಾಚೀನರ ಮತ. ಶುಕ್ರನು ರಜತ ಲೋಹಕಾರಕನು. ಚಂದ್ರನಿಂದ ಬೆಳ್ಳಿಯ ಉತ್ಪತ್ತಿ ಇದರಿಂದ ರಜತಕಾರಕನೆಂದು ಪರಾಶರನು ಹೇಳಿದ್ದಾಗಿರಬೇಕು.

ಮನೋಬುದ್ಧಿ ಪ್ರಸಾದಂ ಚ ಮಾತೃ ಚಿಂತಾಂ ಚ ಚಂದ್ರಮಾಃ (ವಿದ್ಯಾರಣ್ಯ)

ಮಾನವ ಮನಸ್ಸಿನ ನೆಲೆ, ಬುದ್ಧಿ, ಮನಸ್ಸಿನ ಪ್ರಸಾದ ಯಾ ರಾಜ ಪ್ರಸಾದ (ಅನುಗ್ರಹ) ಮಾತೃಗಳ ಚಿಂತನೆಯನ್ನು ಚಂದ್ರನಿಂದ ಮಾಡ ಬೇಕೆಂದು ಸಾರ. ಚಂದ್ರನು ಮನೋಕಾರಕ ಗ್ರಹನು. ಈ ಕಾರಣದಿಂ ದಲೇ ಮನಸ್ಸಿನ ವಿಚಾರವನ್ನು ಕೊಡಲಾಗಿದೆ. ಬುದ್ಧಿಯ ವಿಚಾರವನ್ನು ಚಂದ್ರನಿಂದ ತಿಳಿಯಬೇಕೆಂದು ಹೇಳಿದ್ದು ಸಮಾಧಾನಕರವಲ್ಲ. ಮನಸ್ಸು ಮತ್ತು ಬುದ್ಧಿ ಇವೆರಡು ಬೇರೆ ಬೇರೆ .ಬುದ್ಧಿಯನ್ನು ಬುಧನಿಂದ ಚಿಂತಿಸಿ ದುದು ಕಂಡುಬರುತ್ತದೆ. ಮನಸ್ಸು ಬುದ್ಧಿ ಇವೆರಡು ಭಿನ್ನವಾಗಿದ್ದು ಚಂದ್ರ ನಿಂದ ಇವೆರಡನ್ನೂ ಚಿಂತಿಸುವುದು ಶಕ್ಯವಿಷಯವಲ್ಲ. ಮನಸ್ಸನ್ನು ಚಿಂತಿ ಸಬಹುದಾಗಿದೆ. ಜನರು ಹೊಂದುತ್ತಿರುವ ರಾಜಾನುಗ್ರಹ ಸ್ಥಾನಮಾನ

ಗಳು ರವಿಚಂದ್ರರು ರಾಜರಾಣಿಯರೆಂದೂ "ರಾಜಾನೌ ರವಿ ಶೀತಗೂ" ಎಂಬ ವರಾಹನ ವಚನಾಧಾರದ ಮೇಲಾಗಿದೆ. ರವಿ ಚಂದ್ರರಲ್ಲಿ ಸೂರ್ಯನು ರಾಜ. ಚಂದ್ರ ರಾಣಿಯೆಂದು ಗ್ರಂಥಕಾರರು ವಿವರಿಸಿರುವರು. ರಾಜ ರಾಣಿಯರ ಅನುಗ್ರಹ ವಿಷಯ ಸೂರ್ಯ ಚಂದ್ರರಿಂದಾಗಬೇಕಿದೆ. ರಾಣಿಯು ಚಂದ್ರನು, ರಾಜನು ರವಿಯು. ಅಂತೆಯೇ ಪಿತೃ ಸೂರ್ಯ, ಮಾತೃ ಚಂದ್ರ. ಪಿತೃಮಾತೃಗಳ ಸತ್ತೆ ಭಿನ್ನವಾಗಿರುವಂತೆ ರಾಜ ರಾಣಿಯರ ಸತ್ತಾ ಕ್ರಮ ಭಿನ್ನ. ಪಾಲನಾ ಶಕ್ತಿ ಮಾತೃವಿಗೆ, ಸೃಷ್ಟಿ ಶಕ್ತಿ ರಕ್ಷಣಾಶಕ್ತಿಗಳು ಪಿತೃವಿಗೆ. ರವಿಚಂದ್ರರಿಂದ ವೈದ್ಯಕೀಯ ವೃತ್ತಿಯನ್ನು ಚಿಂತಿಸುತ್ತಿರುವೆವು. ಚಂದ್ರನು ಕೇವಲ ಪಾಲನಾತ್ಮಕ ಪೋಷಣಾ ಗೃಹನಿರ್ದ್ದ(ನರ್ಸರೀ ಶಕ್ತಿ) ಶುಶ್ರೂಷಾಶಕ್ತಿಯ ವೈದ್ಯಚಿಕಿತ್ಸೆ ಚಂದ್ರನಿಗೊಪ್ಪುತ್ತದೆ ರವಿಗೆ ಶಸ್ತ್ರಾಘಾತದ ಕಠಿಣ ಕರ್ಮಚಿಕಿತ್ಸೆಗಳೊಪ್ಪುತ್ತವೆ. ರವಿಗೆ ಕಣ್ಣಿನ ಮತ್ತು ಹಲ್ಲುಗಳ ಮೇಲಿರುವ ಅಧಿಕಾರವೂ ಇದೆ.

"ಧವಲ ಚಾಮರ ಯಶೋದಯಾ ಮೋಹಕಾಂತಿಮುಖಲಾವಣ್ಯಮಾತೃ ಮನಃಪ್ರಸಾದಕಾರಕಶ್ಚಂದ್ರಃ" (ಸರ್ವಾರ್ಥ ಚಿಂತಾಮಣಿ)

ಸರ್ವಾರ್ಥ ಚಿಂತಾಮಣಿಕಾರನುಧವಲ (ಬಿಳುಪು)ವರ್ಣವನ್ನು ಹೇಳಿರುವುದು, ನೈಸರ್ಗಿಕ ಗುಣವನ್ನು ಕಂಡೇ ಆಗಿರುವುದು. "ಗೌರ ಇಂದುಃ" ಎಂಬ ವರಾಹನ ಮಾತನ್ನು ಅವಲಂಬಿಸಿಯೇ ಸರ್ವಾರ್ಥ ಚಿಂತಾಮಣಿ ಕಾರಕನು ಧವಲ ಎಂದಿರುವನು.

ಚಾಮರ ರಾಜಾಧಿಕಾರಸ್ಥಾನ ವಸ್ತು. ಈ ಕಾರಣದಿಂದ ಚಾಮರವನ್ನು ಚಂದ್ರನಿಗೆ ಹೇಳಿದ್ದಾರೆ. ರಾಹುವಿನಿಂದ ಚಾಮರದ ಚಿಂತೆಗೊಳ್ಳುವುದು ವಿಹಿತವಾಗುವುದು. ಯಶಸ್ಸು ಕಾರ್ಯಸಫಲತೆಯಿಂದ ಉಂಟಾಗುವುದು. ಶನಿರಾಹುಗಳಿಗೆ ಕಾರ್ಯಸಫಲತೆ ಕರ್ಮ ವಿಚಾರ ಸಂಪರ್ಕವಿರುವುದಾದರೂ ಮನಸ್ಸಿನ ದೃಢನಿರ್ಧಾರ ಶುದ್ಧತೆಗಳಿಂದ ಯಶಸ್ಸಿದ್ಧಿಯೆಂಬುದನ್ನು ಮರೆಯತಕ್ಕದ್ದಲ್ಲ. ಆದ್ದರಿಂದ ಯಶಸ್ಸನ್ನು ಚಂದ್ರನಿಂದ ತಿಳಿಯುವುದು ತಪ್ಪಲ್ಲ.

ದಯ ಮೋಹಗಳೆರಡು ಮನದ ಸ್ವರೂಪಗಳು. ಕಾಂತಿ ಚಂದ್ರನ

ತೇಜೋಧರ್ಮವನ್ನು ಅವಲಂಬಿಸಿ ಹೇಳಿರುವನು. ಮುಖಲಾವಣ್ಯವನ್ನು ಕುರಿತು ಕವಿಗಳು ವರ್ಣಿಸುವಲ್ಲಿ ಚಂದ್ರನನ್ನೇ ಅವಲಂಬಿಸಿರುವುದನ್ನು ಗ್ರಂಥಗಳಲ್ಲಿ ಕಾಣುವವು. ಚಂದ್ರಮುಖಿ, ಚಂದ್ರವದನೆ, ಶಶಿವದನೆ ಎಂದು ಮೊದಲಾಗಿ ಕವಿಗಳೆಷ್ಟು ವರ್ಣಿಸಿಲ್ಲ? ಮುಖದ ಚೆಲುವನ್ನು ಚಂದ್ರನಿಂದ ಚಿಂತಿಸುವಾಗ ಚಂದ್ರನ ಕೇಂದ್ರದಲ್ಲಿ ಹೊಂದಿರುವ ಶುಭಾಶುಭರಿಂದ ಚಿಂತಿಸುವುದು ಅಗತ್ಯ. ಪಾಪಗ್ರಹರು ಚಂದ್ರ ಕೇಂದ್ರಗತರಾಗಿದ್ದರೆ ಮುಖ ಸೌಂದರ್ಯಕ್ಕೆ ನ್ಯೂನತೆಯಾಗುವುದು. ಚಂದ್ರನ ಹಿಂದು ಮುಂದು ಶುಭರಿದ್ದರೆ ಮುಖ ಸೌಂದರ್ಯ ಅಧಿಕವಾಗುವುದು. ಚಂದ್ರನು ಅವಲಂಬಿಸಿದ ರಾಶಿ ಅವನ ಕೇಂದ್ರಗತ ಗ್ರಹ, ಮತ್ತು ದ್ವಿದ್ವಾದಶದ ಗ್ರಹರ ಮೂಲಕ ಮುಖ ಸೌಂದರ್ಯವನ್ನು ವಿವೇಚಿಸಬಹುದಾಗಿದೆ.

"ಚೇತೋಬುದ್ಧಿನೃಪಪ್ರಸಾದ ಜನನೀ ಸಂಪತ್ಕರಶ್ಚಂದ್ರಮಾಃ" (ವೈದ್ಯನಾಥ)

ಚೇತಸ್ಸು, ಬುದ್ಧಿ, ರಾಜಾನುಗ್ರಹ ತಾಯಿ ಸಂಪತ್ತುಗಳ ಕಾರಕ ಚಂದ್ರನೆಂದು ವೈದ್ಯನಾಥನು ಹೇಳಿರುವನು. ಸಂಪತ್ತಿನ ಚಿಂತನೆಯನ್ನು ಚಂದ್ರನಿಂದ ಹೇಳಿದ್ದು ಗ್ರಾಹ್ಯವಾಗಿ ಕಂಡುಬರುವುದಿಲ್ಲ.

"ಅಪಿ ಕುಸುಮಭೋಜ್ಯ ಮಣಿರಜತ ಶಂಖಲವಣೋದಕೇಷ್ಟವಸ್ತ್ರಾಣಾಂ।
ಭೂಷಣ ನಾರೀಘೃತ ತಿಲ ತೈಲಕ ನಿದ್ರಾಪ್ರಭುಶ್ಚಂದ್ರಃ॥" (ಸಾರಾವಲಿ)

ಹೂ, ಭೋಜ್ಯವಸ್ತುಗಳು, ಮಣಿ(ರತ್ನ)ಬೆಳ್ಳಿ, ಶಂಖ, ಉಪ್ಪು, ನೀರು; ಇಷ್ಟವಸ್ತ್ರ, ಆಭರಣ, ಹೆಂಗುಸು, ತುಪ್ಪ, ಎಳ್ಳು, ಎಣ್ಣೆಗಳ ಕಾರಕನು ಚಂದ್ರನು. ಕಲ್ಯಾಣವರ್ಮ ನಿದ್ರಾಕಾರಕತ್ವವನ್ನು ವಿಶೇಷವಾಗಿ ಇಲ್ಲಿ ಹೇಳಿರುವನು. ರಾತ್ರಿ ನಾವು ನಿದ್ದೆಗೊಳ್ಳುವೆವು. ಈ ಕಾರಣದಿಂದಲೇ ಚಂದ್ರನನ್ನು ನಿದ್ರಾಕಾರಕನಾಗಿ ನಿರ್ದೇಶಿಸಿರುವನು. ಮನುಷ್ಯನಿಗೆ ಉಂಟಾಗುತ್ತಿರುವ ನಿದ್ರಾಸುಖ ಎಷ್ಟೆಂಬುದನ್ನು ಚಂದ್ರನು ಹೊಂದಿರುವ ಚರ ಸ್ಥಿರ ದ್ವಿಸ್ವಭಾವ ರಾಶಿಗಳಿಂದ ನಿರ್ದೇಶಿಸಬಹುದಾಗಿದೆ. ಚಂದ್ರನು ಚರರಾಶಿ ಚರಾಂಶಗೊಂಡಾಗಲೂ, ದ್ವಿಸ್ವಭಾವ ರಾಶಿ ದ್ವಿಸ್ವಭಾವಾಂಶಗೊಂಡಾಗಲೂ ನಿದ್ರಾಬಾಧೆಗೆ ಕಾರಣವಾಗುತ್ತಿರುವುದು. ಮರಣದ ದೀರ್ಘ ನಿದ್ರೆ ಶನಿಯನ್ನು ಹೊಂದಿ ಇರುವುದು.

ಸುಬೋಧ ಜ್ಯೋತಿಷ

ಭಾಗ ೨

# ಚಂದ್ರ

ಲೇಖಕ

ಎನ್. ಸುಬ್ರಾಯನ್

**1983**

ಪ್ರಕಾಶಕರು

**ಗಜಾನನ ಪ್ರಕಾಶನ**

ಗಣಪತಿ ಹೈಸ್ಕೂಲ್ ಕ್ರಾಸ್ ರೋಡ್

ಮಂಗಳೂರು-೧

ಬೆಲೆ ರೂ 8.00

"ಧವಲ ಚಾಮರ ಕೀರ್ತಿದವಾತನೋ ಮುಖಕಮಲಂ ಜನನೀ ಮನಸಾಮಪಿ ವಿಧುಬಲಾಬಲ ಯೋಗೆವಿಮರ್ಶತಃ ಕೃತಿಕಲಾನಿಪುಣಃ ಸಃಖಮಾದಿಶೇತ್" ॥ (ಜೀವನಾಥ)

ಬಿಳುಪು, ಚಾಮರ, ಕೀರ್ತಿ, ಇಂದ್ರಿಯನಿಗ್ರಹ, ಮನಸ್ಸು, ಮುಖ ಕಮಲ, ತಾಯಿ ಇವನ್ನು ದೈವಜ್ಞನು ಚಂದ್ರನಿಂದ ಚಿಂತಿಸಬೇಕೆಂದು ಸಾರ. ಕೃತಿ ಕಲಾನೈಪುಣ್ಯಗಳನ್ನು ಚಿಂತಿಸಬೇಕೆಂದು ಇವನ ಮತವೆಂದು ಕೆಲವರ ನ್ನುವರು. ಕೃತಿ(ಕೆಲಸ)ಯು ಮನಸ್ಸನ್ನು ಅವಲಂಬಿಸಿಯೇ ಇರುವುದು. ಕಲಾನೈಪುಣ್ಯತೆಯಲ್ಲಿ ಕೈಗಾರಿಕೆ ಸೇರುವುದು. ಮರ ಲೋಹ, ಮಣ್ಣು ಗಳಿಂದ ಮಾಡುವ ಕಲಾವಸ್ತುಗಳು ಯಾ ಹಲ್ಕಾ ನೂಲುಗಳಿಂದ ತಯಾರಿ ಸುವ ಕಲಾವಸ್ತುಗಳು ಚಂದ್ರನಿಗೊಪ್ಪುತ್ತವೆ. ಲಗ್ನ ಷಷ್ಠಪತಿಯಾಗಿ ಚಂದ್ರನಿದ್ದಲ್ಲಿ ಮೆಟ್ಟು, ಚರ್ಮದ ಪೆಟ್ಟಿಗೆ ಮೊದಲಾದ ಕಲಾಪರ ವಸ್ತು ವ್ಯವಹಾರವನ್ನು ಸೂಚಿಸಬಹುದಾಗಿದೆ. ಚಿತ್ರಕಲಾ ಜ್ಞಾನವನ್ನೂ ಇವನಿಂದ ತಿಳಿಯಬಹುದಾಗಿದೆ. ತೈಲ ಚಿತ್ರಾದಿಗಳ ಸಂಪರ್ಕ ಚಂದ್ರನದು. ಶುಕ್ರನು ಪ್ರತ್ಯಕ್ಷ ಕಲಾಕಾರಕ ಗ್ರಹನು. ಸಂಗೀತಾದಿ ಸಂಬಂಧ ಶುಕ್ರನಿಗಿದೆ.

ಕಲೋಪಕರಣ ಮತ್ತು ಸಂಗೀತಾದಿ ವಿಚಾರಗಳನ್ನು ಚಿಂತಿಸುವಾಗ ಚಂದ್ರ ಶುಕ್ರರನ್ನು ಅವಲಂಬಿಸಬೇಕಾಗುತ್ತದೆ ಚಂದ್ರನು ರೇಡಿಯೋ ಸಂಬಂಧವನ್ನು ಕೊಡಲು ಶಕ್ತನಾಗುತ್ತಾನೆ. ರಸಕಾರಕನು ಚಂದ್ರನು. ಇದರಿಂದ ಜಲೀಯ ವಸ್ತುಗಳ ಮತ್ತು ತೈಲವಸ್ತುಗಳ ಸಂಪರ್ಕ ಚಂದ್ರನಿ ಗಾಗುತ್ತಿರುವುದು. ಕಲಾಪರ ವಸ್ತುಚಿಂತನೆಯಲ್ಲಿ ಶುಕ್ರಚಂದ್ರರಿಗೆ ತುಂಬಾ ಭಿನ್ನತೆ ಇದೆ. ಸಂಗೀತ ಶಾಸ್ತ್ರವು ಮಹತ್ತಾದುದು. ಈ ಕಲೆ ವ್ಯಾಪಾರಕ್ಕೆ ಇಟ್ಟಿರುವ ಕಲಾಪರ ಆಕರ್ಷಕ ವಸ್ತುಗಳಂತಹುದಲ್ಲ. ಮೆಟ್ಟು ಕಲಾಪರ ವಸ್ತು. ಅಂತೆಯೇ ಆಕರ್ಷಕತೆ ಅದರಲ್ಲಿದೆ. ಬೀಡಿ ಮೊದಲಾದವು ಕೈಗಾ ರಿಕಾ ವಸ್ತುಗಳು. ಕಲಾಪರ ಬಿಸ್ಕೆಟು, ಗೇರುಬೀಜ ಮೊದಲಾದ ಭೋಜ್ಯ ವಸ್ತುಗಳು ಚಂದ್ರನವು. ಶುಕ್ರನ ಕಲಾಪರ ವಸ್ತುಗಳು ಚಲಚ್ಚಿತ್ರ, ಸಂಗೀತ ಮೊದಲಾದವು. ಶುಕ್ರನು ಕಣ್ಣು ಶ್ರೋತ್ರಾದಿ ಇಂದ್ರಿಯಗಳಿಂದ ಪ್ರತ್ಯಕ್ಷ ಪ್ರಮಾಣಗೊಳ್ಳುವ ದೃಶ್ಯಶ್ರವ್ಯ ಕಲಾಕಾರಕ ಗ್ರಹನು. ಆದ್ದರಿಂದ

ಚಂದ್ರ ಕಲಾನೈಪುಣ್ಯ ಮತ್ತು ಶುಕ್ರ ಕಲಾನೈಪುಣ್ಯ ವಿಚಾರಗಳು ಭಿನ್ನಭಿನ್ನ.

ಚಂದ್ರನ ಕಾರಕತ್ವ ವಿಚಾರದಲ್ಲಿ ಕಾಳಿದಾಸನು ತುಂಬಾ ವಿಷಯಗಳನ್ನು ಹೇಳಿರುವನು. ಅವನ್ನೂ ಚಿಂತಿಸುವುದು ಯುಕ್ತ.

ಬುದ್ಧಿಃ ಪುಷ್ಪಸುಗಂಧಮಾರ್ಗಮನವ್ಯಾಧಿರ್ದ್ವಿಜಾಲಸ್ಯತಾ
ಶ್ಲೇಷ್ಮಾಪಸ್ಮೃತಿಗುಲ್ಮಭಾವಹೃದಯಂ ಸ್ತ್ರೀ ಸೌಮ್ಯಹಾಹಾನ್ವಿತಾಃ ।
ಸೌಖ್ಯಂಜಲಸ್ವರೂಪ ರಜತಂ ಸ್ಥೂಲೇಕ್ಷುಶೀತಜ್ವರಂ ।
ಯಾತ್ರಾಪ್ರಕೂಪ ತಟಾಕ ಮಾತೃಸಮದೃಕ್ ಮಧ್ಯಾಹ್ನ ಮುಕ್ತಾಕ್ಷಯಾಃ ।
ಧಾವಲ್ಯಂ ಕಟಿಸೂತ್ರ ಕಾಂಸ್ಯಲವಣಂ ಹ್ರಸ್ವಾತ್ಮನಃ ಶಕ್ತಯಃ
ವಾಪೀ ವಜ್ರ ಶರನ್ಮುಹೂರ್ತ ಮುಖಕಾಂತಿ ಶ್ವೇತವರ್ಣೋದರಾಃ ।
ಗೌರೀಭಕ್ತಿ ಮಧುಪ್ರಸಾದಪರಿಹಾಸಾಃ ಪುಷ್ಟಿಗೋಧೂಮಕಾಃ
SSಮೋಹಾಃ ಕಾಂತಿ ಮುಖೇಮನೋಜವದಧಿಪ್ರೀತಿಃ ತಪಸ್ವಿಯಃ
ಲಾವಣ್ಯಂ ನಿಶಿ ವೀರ್ಯ ಪತ್ನಿಮ ಮುಖೇ ಪಿಟ ಕ್ಷಾರ ಕಾರ್ಯಾಸ್ಪದಃ
ಪುಕ್ಸಗ್ಮಿಕ್ರಿಯ ಮಧ್ಯ ಲೋಕ ನವರತ್ನಾಸಿಹ ಮಧ್ಯಮವಯಃ ।
ಜೀವೋ ಭೋಜನ ದೂರದೇಶಗಮನ ಲಗ್ನಂಚ ದೂರ್ವಾಧಯಃ ।
ಛತ್ರಾದ್ಯಂಚಿತರಾಜಚಿಹ್ನಂ ಸುಫಲೀ ಸದೃಕ್ತ ಧಾತುಸ್ತಥಾ ।
ಮೀನಾದ್ಯಾಃ ಜಲಜಾಃ ಸರೀಸೃಪದುಕೂಲೇ ಸದ್ವಿಕಾಸ ಸ್ಫುರತ್
ಮದ್ಯ ಸ್ಫಾಟಿಕಂ ತತೋ ಮೃದುಲಕಂ ಮಸ್ತಂತ್ವಮೀಸ್ಮಸ್ನಿಧೌಃ ॥

(ಕಾಳಿದಾಸ).

ಚಂದ್ರನಿಂದ ಬುದ್ಧಿಯನ್ನು ಹೇಳಬೇಕೆಂದು ಕಾಳಿದಾಸನ ಮತ. ಹೂ, ಪರಿಮಳ, ಕೋಟೆ ಗಮನ, ರೋಗ, ದ್ವಿಜರು (ಬ್ರಾಹ್ಮಣರು ಯಾ ಪಕ್ಷಿಗಳು), ಆಲಸ್ಯ, ಕಫ, ಸ್ಮೃತಿ ತಪ್ಪುವಿಕೆ(ಅಪಸ್ಮಾರ ರೋಗ), ಗುಲ್ಮ ಭಾವ(ವಿಚಾರ-ಕ್ರಿಯ) ಹೃದಯ, ಸ್ತ್ರೀ, ಸೌಮ್ಯತೆ, ಹಾಪ, ಹುಳಿ, ಸೌಖ್ಯ, ನೀರು, ಆಕೃತಿ, ಬೆಳ್ಳಿ, ಸ್ಥೂಲತೆ, ಕಬ್ಬು, ಶೀತಜ್ವರ, ಯಾತ್ರೆ, ಬಾವಿ-ಕೆರೆ, ತಾಯಿ, ಸಮದೃಷ್ಟಿ, ಮಧ್ಯಾಹ್ನ, ಮುತ್ತು, ಕ್ಷಯ, ಬಿಳುಪು, ಕಟಿಸೂತ್ರ(ಉಡುದಾರ), ಕಂಚು, ಉಪ್ಪು, ಕಿರಿ ಮನಸ್ಸು, ಮನೋಶಕ್ತಿ, ವಜ್ರ, ಶರತ್ಕಾಲ, ಮುಹೂರ್ತ, ಮುಖಕಾಂತಿ, ಬಿಳಿವರ್ಣ, ಹೊಟ್ಟೆ, ಗೌರೀ(ದುರ್ಗಾ)ಭಕ್ತಿ ಜೇನು, ಪ್ರಸಾದ, ಪರಿಹಾಸ, ಪುಷ್ಟಿ, ಗೋಧಿ, ಆಮೋಹ, ಕಾಂತಿ, ಮುಖ, ಮನೋವೇಗ, ಮೊಸರು, ಪ್ರೀತಿ, ತಪಸ್ಸು,

ಯಶಸ್ಸು, ಚೆಲುವು, ರಾತ್ರಿಯಲ್ಲಿ ಶಕ್ತಿ, ಪಶ್ಚಿಮ ಮುಖ, ವಿಟಿ, ಕ್ಷೀರ, ಕಾರ್ಯಪ್ರಾಪ್ತಿ, ವಿರುದ್ಧ ದಿಕ್ಕು, ಪ್ರಿಯರು, ಮಧ್ಯವಯಸ್ಸು, ಪ್ರಾಣ, ಊಟ, ದೂರದೇಶಗಮನ, ಲಗ್ನ, ಕ್ಷಯರೋಗ, ಛತ್ರಾದಿ ರಾಜಚಿಹ್ನೆ, ಉತ್ತಮಫಲ, ಒಳ್ಳೆಯ ರಕ್ತ, ಧಾತು, ಮೀನು ಮೊದಲಾದ ಜಲೋತ್ಪನ್ನ ಪ್ರಾಣಿವರ್ಗ, ಹಾವುಗಳು, ಪಟ್ಟೆವಸ್ತ್ರ, ಒಳ್ಳೆಯ ವಿಕಾಸ, ಸ್ಫಟಿಕ,ಮಾರ್ದವ, ವಸ್ತ್ರಗಳು ಚಂದ್ರನ ಕಾರಕತ್ವದವೆಂದು ಸಾರ.

ಕೋಟಿಯ ವಿಷಯ ಚಂದ್ರನಿಂದ ಚಿಂತಿಸತಕ್ಕದ್ದು ಸಾಮಾನ್ಯ. ಪ್ರಯಾಣವಿಚಾರವನ್ನು ಚಂದ್ರನು ಚರಗ್ರಹನಾದ್ದರಿಂದ ಗಮನವೆಂದು ಹೇಳಲಾಗಿದೆ. ವ್ಯಾಧಿಚಿಂತನೆಯನ್ನು ಕೇಳಿದ ಹೊತ್ತಿನಲ್ಲಿ ಹೇಗೆಂದು ಚಿಂತಿಸಲು ಚಂದ್ರನೇ ಸಹಾಯಕನು. ಕೇಳಿದ ಸಮಯಕ್ಕೆ ಆಗುವ ಲಗ್ನದಿಂದ ಚಂದ್ರನು ಯಾವ ನಕ್ಷತ್ರದಲ್ಲಿರುವನು ಎಂದು ಲೆಕ್ಕಮಾಡಿ ಆ ದಿನದಿಂದ ಅಷ್ಟೇ ನಕ್ಷತ್ರಗಳಷ್ಟು ಹಿಂದಿನ ದಿನ ರೋಗಾರಂಭವಾಗಿದೆಯೆಂದು ಹೇಳಬೇಕು.ರೋಗ ಪ್ರಶ್ನೆಯನ್ನು ಮಾಡಿದಾಗ ಯಾವಾಗ ರೋಗ ಆರಂಭಿಸಿದ್ದು ಎಂಬುವನ್ನು ತಿಳಿಯಲು ಚಂದ್ರನು ಸಹಾಯಕನಾಗುತ್ತಾನೆ.

> "ಲಗ್ನಾದಿ ತೋಡುತಶ್ಚಂದ್ರೋ ಯಾವತ್ಯುಡುನಿ ಸಂಸ್ಥಿತಃ ।
> ತಸ್ಮಾತ್ತಾವತಿ ನಕ್ಷತ್ರೇ ರೋಗಾರಂಭ ಮುದೀರಯೇತ್ ॥

ಎಂದು ಈ ವಿಚಾರದಲ್ಲಿ ಪ್ರಮಾಣವಿರುವುದು. ಲಗ್ನಾದಿತಃ ಉಡುತ = ಲಗ್ನಾದಿಯ ನಕ್ಷತ್ರದಿಂದ, ಚಂದ್ರಃ = ಚಂದ್ರನು; ಯಾವತಿ = ಎಷ್ಟನೆಯ, ಉಡುನಿ = ನಕ್ಷತ್ರದಲ್ಲಿ; ಸಂಸ್ಥಿತಃ = ನಿಂತಿರುವನು; ತಸ್ಮಾತ್ = ಅಲ್ಲಿಂದ; ತಾವತಿ = ಅಷ್ಟನೆಯ; ನಕ್ಷತ್ರೇ = ನಕ್ಷತ್ರದಲ್ಲಿ ರೋಗಾರಂಭಂ = ರೋಗದ ಆರಂಭ (ಸುರುವಾಗುವಿಕೆ)ನನ್ನು; ಉದೀರಯೇತ್ = ಹೇಳಬೇಕು. (ಶಬ್ದಾರ್ಥ)ಚಂದ್ರನಿಂದ ಬ್ರಾಹ್ಮಣನನ್ನು ಹೇಳಕೂಡದು. ಸ್ತ್ರೀಯನ್ನು ಹೇಳಬೇಕು. ಚಂದ್ರನಿಂದ ಉತ್ತಮ ಕುಲಸ್ತ್ರೀಯನ್ನು ಹೇಳಕೂಡದು ಶುಕ್ರನಿಗೆ ಉತ್ತಮ ಕುಲಸ್ತ್ರೀ ಕಾರಕತ್ವ. ಚಂದ್ರನು ವ್ಯಾಪಾರಕಾರಕನೆಂದೂ ಆದ್ದರಿಂದ ವೈಶ್ಯಕಾರಕನೆಂದೂ ಕೆಲವರ ಮತ. ಆಲಸ್ಯ ಶನಿಯ ಗುಣಧರ್ಮ. ಶ್ಲೇಷ್ಮರೋಗ ಶನಿಗೆ, ರಾಹುವಿಗೆ ಅಪಸ್ಮೃತಿ, ಗುಲ್ಮ ಇದು

ವಾಯುರೋಗ ಗುರುವಿಗೆ. ಈ ರೋಗ. ಪಾಪಕ್ಕೆ ಮನಸ್ಸೇ ಕಾರಣ. ಆದ್ದರಿಂದ ಪಾಪಚಿಂತನೆ ಚಂದ್ರನಿಗೆ. ಚಂದ್ರನಿಗೆ ಸ್ಥೂಲತೆಯು ಗಾಂಭೀರ್ಯ ದರ್ಶನ ಮಾತ್ರ. ಚಂದ್ರನು ತೇಜೋಕಾರಕ ಗ್ರಹನಾದ್ದರಿಂದ ದೃಷ್ಟಿ ವಿಚಾರವು ಚಂದ್ರನಿಂದ ಬರುವುದು. ವೃದ್ಧಿಕ್ಷಯಗಳು ಚಂದ್ರನಿಗಿದ್ದು ಚಂದ್ರನಿಂದ ಕ್ಷಯಚಿಂತನೆಯನ್ನು ಮಾಡಿರುವರು; ಮನಸ್ಸಿನ ಶಕ್ತಿಯು ವಿಷಯದಲ್ಲಿ ನಿರ್ವೇಚನಾಶಕ್ತಿಯೆಂದು ತಿಳಿಯಬೇಕು. ಋತುಗಳಲ್ಲಿ ಶರದೃತು ಚಂದ್ರನಿಗೆ. ಶರತ್ಕಾಲದ ಚಂದ್ರನಿಗೆ ಶೋಭಾಧಿಕ್ಯವೆಂದು ಕವಿಗಳ ಸಂಕೇತ. ಕವಿಸಮಯ ಶರದೃತುವಿಗೇ ಪ್ರಾಮುಖ್ಯತೆಯನ್ನು ಕೊಟ್ಟಿದೆ. ಮನೋಜೀವ = ಮನೋವೇಗ ಚಿಂತನೆಯನ್ನು ನಕ್ಷತ್ರದ ವೃದ್ಧಿಕ್ಷಯಗಳಿಂದ ತಿಳಿಯುವುದು. ಜನ್ಮನಕ್ಷತ್ರದ ಪರಮ ಘಟಿ ಅರುವತ್ತಕ್ಕಿಂತ ಹೆಚ್ಚಾಗ ಮನಸ್ಸಿನ ವೇಗ ಚಂಚಲತೆಗಳು ಹೆಚ್ಚೆಂದು ತಿಳಿಯಬೇಕು. ಅರುವತ್ತಕ್ಕಿಂತ ಕಡಿಮೆಯಾದಲ್ಲಿ ಮನೋವೇಗದ ಕ್ಷೀಣತೆಯನ್ನು ಹೇಳಬೇಕು. ಚಂದ್ರನು ಹೊಂದಿರುವ ರಾಶಿಗಳಿಂದ ಮನುಷ್ಯನಿಗೆ ವೇದಾಂತ ವಿಷಯಾಸಕ್ತಿಯನ್ನು ನಿರ್ದೇಶಿಸಬೇಕು. ತಪಸ್ವೀ ಎಂಬುದನ್ನು ಈ ಕಾರಣದಿಂದಲೇ ಹೇಳಲಾಗಿದೆ. ಆತ್ಮ, ಧನ ವಿಚಾರದ ಚಂದ್ರನ ರಾಶಿ ಶೀಲ ಗುಣಧರ್ಮದ ಭಾಗದಲ್ಲಿ ಯಾವ ಯಾವ ರಾಶಿಯವರಿಗೆ ವೇದಾಂತಾಸಕ್ತಿ ಆತ್ಮಜ್ಞಾನ ಉಂಟಾಗುವುದೆಂಬುದನ್ನು ತಿಳಿಯಬಹುದು. ವಿಟಪುರುಷನ ಚಿಂತನೆ ಚಂದ್ರನಿಗೆ ಒಪ್ಪುತ್ತಿಲ್ಲ. ವಿಟ್ = ಎಂದಾಗಿರಬೇಕು. ಮಲ = ಕಾಗೆ ಮೊದಲಾದವುಗಳ ಮಲ ಆಗಬಹುದು. ಮನುಷ್ಯನ ಮರಣಕಾಲದ ಚಿಂತನೆಯನ್ನು ಮಾಡುವಾಗ ಚಂದ್ರನಿಂದಲೇ ಆ ಮುಹೂರ್ತವನ್ನು ನಿರ್ದೇಶಿಸುವರು. ಅದೂ ಅಲ್ಲದೆ ವಿವಾಹಾದಿ ಮುಹೂರ್ತ ಸಾಧನೆಗೂ ಚಂದ್ರನೇ ಸಹಾಯಕನು. ರಕ್ತ = ಸ್ತ್ರೀಯರ ರಜೋದರ್ಶನದ ರಕ್ತ ಪ್ರಮಾಣಚಿಂತನೆ ಚಂದ್ರನಿಂದಲೇ ನಡೆಯುತ್ತದೆ. "ಕುಜೇಂದು ಹೇತು ಪ್ರತಿಮಾಸಮಾರ್ತವಮ್" ಎಂದು ಈ ವಿಚಾರವನ್ನು ವರಾಹನು ಸ್ಪಷ್ಟಪಡಿಸಿರುವನು. ಹಾಲು-ಮಕ್ಕಳಿಗೆ ತಾಯಿಯ ಮೊಲೆ ಹಾಲಿನ ಸುಖ ಹೇಗೆಂದು ತಿಳಿಯುವಾಗ ಚಂದ್ರನೇ ಸಹಾಯಕನು. ಕೃಷ್ಣಪಕ್ಷದಲ್ಲಿ ಜನನವಾದ ಮಕ್ಕಳಿಗೆ ಹೆಚ್ಚುಕಾಲ

ತಾಯಿಯು ಮೊಲೆಹಾಲನ್ನು ಹೊಂದಲಾಗುವುದಿಲ್ಲ. ಭೋಜನಪ್ರಶ್ನೆಯಲ್ಲಿ ಚಂದ್ರನೇ ಸಹಾಯಕನಾಗುತ್ತಾನೆ. ಶಕ್ತಿಗಳು ಹಲವಾರು. ವಿದ್ಯುತ್ತಿನ ಶಕ್ತಿ, ಲೋಹ ಚುಂಬಕದ ಶಕ್ತಿ. ಮಹಾನುಭಾವರ ಶಕ್ತಿ ಇವೇ ಮೊದಲಾದುವನ್ನು ಚಂದ್ರನಿಂದ ತಿಳಿಯಬೇಕಿದೆ. ಮಾನವನಿಗೆ ಬೇಕಾದ ಧಾತು-ಬೀಜಶಕ್ತಿ ವಿಚಾರದಲ್ಲಿ ಸಂತಾನ ತಿಥಿ, ಸಂತಾನ ಚಂದ್ರನನ್ನು ನಿರ್ದೇಶಿಸಿರುವರು. ಕ್ಷೇತ್ರಬೀಜಸ್ಫುಟವೆಂದು ಎರಡಿದೆ. ಸ್ತ್ರೀ ಜಾತಕದಿಂದ ಕ್ಷೇತ್ರ ಸ್ಫುಟವನ್ನೂ ಪುರುಷಜಾತಕದಿಂದ ಬೀಜಸ್ಫುಟವನ್ನೂ ಮಾಡುವೆವು. ಸ್ತ್ರೀಯು ಕ್ಷೇತ್ರ ಗರ್ಭಧಾರಣೆಗೆ ಯೋಗ್ಯವೋ ಅಯೋಗ್ಯವೋ ಎಂಬುದನ್ನು ಕ್ಷೇತ್ರ ಸ್ಫುಟದಿಂದ ನಿರ್ಧರಿಸುವೆವು. ಬೀಜಸ್ಫುಟದಿಂದ ಪುರುಷನಿಗೆ ಬೀಜಶಕ್ತಿ-ಸಂತಾನ ಬೀಜಶಕ್ತಿ ಇದೆಯೋ ಇಲ್ಲವೋ ಎಂಬುದನ್ನು ನಿರ್ಣಯಿಸುವೆವು. ಸಂತಾನ ವಿಷಯದಲ್ಲಿ ಕ್ಷೇತ್ರ ಸ್ಫುಟಕ್ಕೂ ಸಂತಾನ ತಿಥಿಸ್ಫುಟಕ್ಕೂ ಚಂದ್ರನ ಅಗತ್ಯವಿದ್ದು ಇವನಿಂದ ಧಾತುವಿನ ವಿಚಾರವನ್ನು ಕೊಡಲಾಗಿದೆ. ಮಾನವನ ದೇಹದಲ್ಲಿ ಏಳು ಬಗೆಯ ಧಾತುಗಳಿವೆ. ಅವುಗಳಲ್ಲಿ ಚಂದ್ರನು ರಕ್ತಧಾತು ಕಾರಕನು.

ಅಸ್ಥಿ ರಕ್ತಂ ಚ ಮಜ್ಜಾ ಚ ತ್ವಗ್ವಸಾ ಶುಕ್ಲಂ ಚ ಸಸ್ನಸಾ ।
ಏವಂ ಹಿಧಾತವಃ ಸಪ್ತ ಸೂರ್ಯಾದೀನಾಂ ಪ್ರಕೀರ್ತಿತಾ ॥

ಎಲುಬು ಸೂರ್ಯನಿಗೆ, ರಕ್ತ ಚಂದ್ರನಿಗೆ, ಮಜ್ಜಾ ಕುಜನಿಗೆ, ಚರ್ಮ ಬುಧನಿಗೆ, ವಸೆ ಗುರುವಿಗೆ, ಶುಕ್ಲ ಶುಕ್ರನಿಗೆ, ಶನಿಗೆ ನಸಾನರ ಧಾತುಗಳು.

ಚಂದ್ರನು ಮನೋಕಾರಕ ಗ್ರಹನು. ಈ ಗ್ರಹನಿಂದ ಪಾಶ್ಚಾತ್ಯರು ಬೇರೆ ಬೇರೆ ಫಲವನ್ನು ಹೇಳಿರುವರು. ಅವರಲ್ಲಿ William Lily:-She singnifies queens, countesses, Ladies, all manners of women as also the common people, travellers, pilgrims, sailors, fishermen, fishmongers, brewers, tapsters, publicans, letter carrieıs, Coachmen, huntsmen, massengers, mariners, milkers, maltsters, drunkards, oysterwives, fishermen, charm-

-women, tripewomen, and generally such women as carry commodities in the streets, also midwives, nurses etc. Hackneymen, watermen, water-bearers ಹೀಗೆಂದಿರುವನು. Ptolemy says; She has however, also a moderate share in the productions of heat, in consequence of the illumination, she receives from the sun.

ಪಾಶ್ಚಾತ್ಯ ಔಷಧ, ಪೇಟೆಂಟ್ ಮೆಡಿಸನ್ಸ್, ಅನ್ನಧಾನ್ಯಗಳ ಅಂಗಡಿ, ಇರಿಗೇಶನ್ ಖಾತೆ, ಮುನಿಸಿಪಾಲಿಟಿ, ವಾಟರ್ ವರ್ಕ್ಸ್, ಉಪ್ಪು, ಉಪ್ಪಿನ ಕಾರ್ಖಾನೆ, ಉಪ್ಪಿನ ಸ್ನಾನ, ಸರಕಾರದ ಉಪ್ಪಿನ ಡಿಪಾರ್ಟಮೆಂಟು, ಕಸ್ಟಮ್ ಡಿಪಾರ್ಟಮೆಂಟು, ಮೆರಿನ್ ಇಲಾಖೆ, ಹಡಗು, ದೋಣಿ, ಹಡಗಿನ ಕಾರ್ಖಾನೆ, ಕಲಾಸಿಗಳು, ಟಂಕಸಾಲೆ, ಹಾಲಿನಡಯುರಿ. Botany, Materia, Madica,equity, Bactriology, Microbilogy, ವಿಮಾನ, ಅಕ್ಕಿ, ಹತ್ತಿ, ಬಿಳಿವಸ್ತ್ರ, ರೈಲಿನ ಅಧಿಕಾರಿಗಳು, ಕೆಮಿಸ್ಟರು ಮತ್ತು ಡ್ರಗ್ಗಿಸ್ಟರು, P. W. D. department, Glass works, magnetic observatoryಗಳನ್ನು ಚಂದ್ರನಿಂದ ತಿಳಿಯಬಹುದು.

ತಾಯಿ, ಮನಸ್ಸು, ಬೀಜಶಕ್ತಿಕಾರ್ಯ,ಯಶಸ್ಸು ಪುಷ್ಟಿ,ರಾಜಪ್ರಸಾದ ಸಂಪತ್ತು, ಕವಿ, ಭೋಜ್ಯ, ವಸ್ತ್ರ, ನಿದ್ರ, ಕೀರ್ತಿ, ಕಲಾನಿಪುಣತೆ, ವ್ಯಾಧಿ, ತಾಯಿಯ ಮೊಲೆಹಾಲು, ರಜೋದರ್ಶನ, ಮೊದಲಾದುವನ್ನು ಜನನ ಪತ್ರಿಕೆಯಿಂದ ತಿಳಿಯಬಹುದು.

ವಿಲಿಯಮ್ ಲಿಲಿ ತುಂಬಾ ವಿಚಾರ ಕೊಟ್ಟಿದ್ದು ಯಾವ ಉಪಯೋಗಕ್ಕೂ ಬೀಳದಂತಿದೆ. ದಯಾ, ಮೋಹ, ಆಲಸ್ಯ, ಪರಿಹಾಸ, ವೇಗ, ಪ್ರೀತಿ, ಈ ಸ್ವಭಾವಗಳನ್ನು ಪ್ಟೋಲೆಮಿಯವರು ಹೇಳಿದ್ದು ಚೆನ್ನಾಗಿ ಕಂಡು ಬರುತ್ತದೆ.

ಮೋಕ್ಷಕ್ಕೆ ಸಾರ್ವಜನಿಕ ಪರೋಪಕಾರಕೃತ್ಯ, ಜಂಗಲೀಖಾತೆ, ವೃಷ

ಭಕ್ಕೆ ಆಸ್ಪತ್ರೆಯ ಸಂಬಂಧಿಕರು, ಆಹಾರ ವಿಕ್ರಯಗಾರರು, ಧಾನ್ಯದ ಅಂಗಡಿಗಾರರು, ವ್ಯಾಪಾರ ಸಂಪರ್ಕದವರು, ಸ್ವರ್ಣಕಾರರು, ಮಿಥುನಕ್ಕೆ ವೈದ್ಯ, ಪರಿದಾಸ; ಪುರಾಣಿಕರು, ಕರ್ಕಟಕ್ಕೆ ಚಿನ್ನಬೆಳ್ಳಿ ವ್ಯಾಪಾರ ಸಂಪರ್ಕ ದವರು, ಸಿಂಹಕ್ಕೆ ದೊಡ್ಡ ನೆಲೆಯುವರು, ನೌಕರರು, ಕನ್ಯೆಗೆ ರೈಲು,ಅಂಚೆ, ಟೆಲಿಗ್ರಾಫ್, ಧ್ವನಿಮುದ್ರಕರು, ತುಲೆಗೆ ಗಾಯನ, ಗಾಯನಾಧಿಕಾರಿಗಳು, ಸಂಸ್ಥೆಯ ಸ್ಥಾಪಕರು, ವೃಶ್ಚಿಕಕ್ಕೆ ವೈದ್ಯಕೀಯ ಸಂಪರ್ಕದವರು, ಪಾಕ ಗಾರ, ಧನುವಿಗೆ, ಡಾಕ್ಟರರು, ಸೈನಿಕ ವೃತ್ತಿಯವರು, ಯಾಂತ್ರಿಕರು, ಮಕರಕ್ಕೆ ಮನೆಮಾರುಗಳ ನಿರ್ಮಾಪಕರು ಮೇಸ್ತ್ರಿಗಳು,ಕುಂಭಕ್ಕೆ ಶಾಸ್ತ್ರೀಯ ವಿಷಯದ ನೌಕರಿ, ಮೀನಕ್ಕೆ ಲೇಖಕರು, ಸರಕಾರ ಉದ್ಯೋಗ ಸ್ಥಾನಾದಿ ಗಳು ಹಿಡಿಯುತ್ತನೆ.

ಕನ್ಯಾಚಂದ್ರನವನೊಬ್ಬನು ಅನೇಕ ವೃತ್ತಿಗೊಂಡು ಆ ಬಳಿಕ ಹೂ ಹಣ್ಣು ಕಾಯಿಗಳ ಸಂಪರ್ಕದಿಂದ ವೃದ್ಧಿಗೊಂಡುದು ಕಂಡಿದೆ. ಮೇಷ ಚಂದ್ರನು ಸಾರ್ವಜನಿಕ ಹಿತಪರ ಕೆಲಸಕ್ಕೆ ಬೀಳುವನು. ವರ್ತಮಾನ ಪತ್ರಿಕೆ ಇಂತಹದು. ಚಂದ್ರನಿಗೆ ಹೇಳಿದ ಕಾರಕತ್ವ ವಸ್ತುಗಳಿಂದ ಜೀವನ ವನ್ನು ಚಿಂತಿಸಬೇಕಿದೆ. ಕೇವಲ ಚಂದ್ರನಿಂದ ಎಲ್ಲಾ ಫಲ ಹೇಳಲು ಸಾಧ್ಯ ವಲ್ಲ. ಮಾನವನ ಎಲ್ಲಾ ವಿಚಾರವನ್ನು ಚಿಂತಿಸಲು ಅನ್ಯಗ್ರಹರನ್ನು ಚಿಂತಿಸ ಬೇಕಿದೆ. ಚಂದ್ರನು ಮನೋಕಾರಕನಾದ್ದರಿಂದ ಅವನಿಗೆ ಪ್ರಾಮುಖ್ಯವನ್ನು ಕೊಡುವವು. ಹೀಗಿದ್ದರೂ ಅನ್ಯಗ್ರಹರನ್ನು ಬಿಡಲಾಗುವುದಿಲ್ಲ.

ವಿದ್ಯಾವಂತರಾಗಿದ್ದು ಉಪವೃತ್ತಿಯಂತೆ ಲೇಖನವೃತ್ತಿಯನ್ನು ಅವಲಂ ಬಿಸುವವರು ಹಲವರಿರುವರು. ಅವರ ಕುಂಡಲಿಯಲ್ಲಿ ಚಂದ್ರಶುಕ್ರರನ್ನು ನೋಡುವ ಅಗತ್ಯವಿದೆ. ಚಂದ್ರಶುಕ್ರರು ಲೇಖನ ಕಲೆಗಳ ಸಂಪರ್ಕವನ್ನು ಕೊಡುತ್ತಿರುವರು. ದ್ವಿತೀಯ ಷಷ್ಠಸ್ಥಾನಗಳ ಸಂಪರ್ಕ, ಪರಸ್ಪರಯುತಿ ಸಂಪರ್ಕ ಚಂದ್ರ ಶುಕ್ರರಿಗೆ ಇಂತಹರಲ್ಲಿರುತ್ತದೆ.

ಚಿತ್ರಭಾನುಸಂವತ್ಸರದ ಮೀನಮಾಸ ೧೧ ಫಾಲ್ಗುಣ ಶುದ್ಧ ೧೫ ಶುಕ್ರವಾರ ದಿವಾ ೨೫॥ ಘಟಿಗೆ ಸಿಂಹಲಗ್ನದಲ್ಲಿ ಜನನ. ಉತ್ತರಾನಕ್ಷತ್ರ. ಕನ್ಯಾರಾಶಿ. ಶಿಷ್ಟ ರವಿದಶಾವರುಷಂ ಮಾಸ ೧೧ ದಿನ ೧೩ ಘಟಿ ೩೦.

| | | | |
|---|---|---|---|
| ರವಿ ೬<br>ಬುಧ ೪ | ಶನಿ ೮<br>ಕೇತು ೭<br>ಮಾಂದಿ ೧ | | ಗುರು ೭ |
| ಕುಜ ೧೨ | ಜಾತಕ | | |
| ಶುಕ್ರ ೫ | ಗ್ರಹಕುಂಡಲಿ | | ಲಗ್ನ ೩ |
| | | ರಾಹು೧೨ | ಚಂದ್ರ೧೨ |

ಈ ಗ್ರಹ ಕುಂಡಲಿಯವರು ಉತ್ತಮ ಕವಿಗಳೂ, ಸಂಶೋಧಕರೂ ಬಹು ಭಾಷಾಭಿಜ್ಞ ಖ್ಯಾತ ಪುರುಷರೂ ಆಗಿರುವರು.

## 3. ಅನ್ಯಫಲ ಭೇದ

ವರಾಹನು "ಮನಸ್ತು ಹಿಮಗುಃ" ಎಂದಿರುವನು. "ಚಿತ್ತಮಿಂದುಃ" ಎಂದು ವೈದ್ಯನಾಥನು ಹೇಳಿರುವನು. ಮಾನವನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಗ್ರಹನು ಚಂದ್ರನು. ಚಿತ್ತ ಮನಸ್ಸುಗಳು ಬೇರೆ. ವೇದಾಂತ ವಿಷಯದಲ್ಲಿ ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಚತುಷ್ಟಯಗಳು ಇರುವವು. ಮಾನವನ ಮನಸ್ಸಿನ ಮೇಲೆ ಚಂದ್ರನ ಪರಿಣಾಮವು ಬುದ್ಧಿಯ ಮೇಲೆ ಬುಧನ ಪರಿಣಾಮವು. ಚಿತ್ತದ ಮೇಲೆ ಗುರುವಿನ ಪರಿಣಾಮವು. ಶುದ್ಧ ಯಾ ಸಾತ್ವಿಕ ಅಹಂಕಾರದ ಮೇಲೆ ಶನಿಯು ಪರಿಣಾಮವು. ಡಾಂಭಿಕ ಅಭಿಮಾನ ಗರ್ವಗಳ ಮೇಲೆ ಕುಜನ ಪರಿಣಾಮ. ಶುಕ್ರನು ಜ್ಞಾನದ ಮೇಲೆ ಪರಿಣಾಮವನ್ನು ಕೊಡುವನು. ರಾಹುಮೋಕ್ಷದ ಮೇಲೆ ಪರಿಣಾಮ ಕೊಡುವ ಗ್ರಹನು.

"ರಾಜಾನೌರವಿಶೀತಗೂ" (ವರಾಹ) ರವಿರಾಜ, ರಾಣಿಚಂದ್ರ.(ರಾಜಾ

ಚ ರಾಜ್ಞೀಚ ರಾಜಾನೌ) ಚಂದ್ರನು ರಾಣಿಯಾದ್ದರಿಂದ ಪಾಲನಾತ್ಮಕ ಗ್ರಹ ನಿದ್ದು ಪ್ರಜಾಕಾರಕ ಗ್ರಹನು.

"ಪ್ರಕಾಶಕೌವ್ಶೌಪ್ರಥಮೌ ಗ್ರಹಾಣಾಂ" ಗ್ರಹಗಳಲ್ಲಿ ಪ್ರಥಮರಾದ ಸೂರ್ಯ ಚಂದ್ರರು ಪ್ರಕಾಶಗ್ರಹರು. ಸೂರ್ಯನ ಪ್ರಕಾಶ ಚಂದ್ರನ ಪ್ರಕಾಶ ಈ ಎರಡೂ ಭಿನ್ನ. ಚಂದ್ರಸೂರ್ಯರ ಪ್ರಕಾಶ ವಿಚಾರದಲ್ಲಿ ಈ ಮೊದಲೇ ವಿವರವನ್ನು ಕೊಡಲಾಗಿದೆ.

"ಚಂದ್ರಃಸಿತಾಂಗೋ ಯುವಾ" ಚಂದ್ರನು ಬಿಳುಪಾದ ದೇಹದವನೂ ತರುಣನೂ ಆಗಿರುವನು. ಆದ್ದರಿಂದ ಚಂದ್ರನ ಫಲ ತಾರುಣ್ಯಾನಂತರ. ಮೂವತ್ತೆರಡೂ ವರುಷಾನಂತರ ಚಂದ್ರನಿಂದ ಫಲವನ್ನು ಚಿಂತಿಸಲು ಇದೇ ಕಾರಣವು.

"ಶುಭಃ ಶಶೀ" ಚಂದ್ರನು ಶುಭಗ್ರಹನು. ಕ್ಷೀಣಚಂದ್ರನು ಪಾಪ ಗ್ರಹನು. ಚಂದ್ರನು ಇರುವ ಸ್ಥಾನಫಲವನ್ನು ಕೆಡಿಸುವವನು. ನವಮದಲ್ಲಿ ಚಂದ್ರನಿದ್ದರೆ ಹಿರಿಯರಿಂದ ಸುಖವಾಗದು. ಇದು ಆತನ ಸ್ಥಾನಫಲ. "ಶುಕ್ಲಾದಿಕೇಷ್ವಿದಶಕೇತು ಮಧ್ಯವೀರ್ಯಶಾಲೀ ದ್ವಿತೀಯ ದಶಕೇತಿ ಶುಭ ಪ್ರದೋಸೌ: ಚಂದ್ರಸ್ತೃತೀಯ ದಶಕೇಪಿ ನರ್ಜಿತಸ್ತು ಸೌಮ್ಯೇಕ್ಷಣಾದಿ ಸಹಿತೋ ಯದಿ ಶೋಭನಸ್ಯಾತ್"

ಶುಕ್ಲಪಕ್ಷದ ದಶಮಿಯವರೆಗೆ ಚಂದ್ರನು ಮಧ್ಯಬಲನು. ಆ ಮೇಲಿನ ಹತ್ತು ದಿನಗಳಲ್ಲಿ ಬಹುಬಲಿಯು. ಅದರ ನಂತರದ ಚಂದ್ರನು ಬಲಹೀನನು ಶುಭದೃಷ್ಟಿ ಯುತಿಗಳಿಂದ ಆತನು ಶುಭನಾಗುವನು ಎಂದು ಸಾರ.

"ಕ್ಷೀಣೇಂದ್ವರ್ಕಮಹೀಸುತಾರ್ಕತನಯಾ ಪಾಪಾಃ ಬುಧಸ್ತೈರ್ಯುತಃ"
(ವರಾಹ)

ಕ್ಷೀಣಚಂದ್ರ, ರವಿ, ಕುಜ, ಶನಿಗಳು ಪಾಪರು. ಅವರೊಂದಿಗೆ ಸೇರಿದ ಬುಧನೂ ಪಾಪನೆಂದು ವರಾಹನ ಮತ. ಚಂದ್ರನ ಮೂಲಕ ತಾರುಣ್ಯ; ಪ್ರೌಢ, ವೃದ್ಧಾವಸ್ಥೆಗಳನ್ನು ಮಾನವನ ಕರ್ಮದಲ್ಲಿ ಸೂಚಿಸ ಬಹುದು. ತಾರುಣ್ಯಾವಸ್ಥೆ ಶುಕ್ಲಪಕ್ಷದ ಮೊದಲ ಹತ್ತು ದಿನಗಳಲ್ಲಿ, ಅವ

ಸ್ಯೆಯ 'ಚಂದ್ರನಿಂದ ವಿಶೇಷ ಫಲ ಬೋಧನೆ ಸಾಧ್ಯವಿಲ್ಲ. ಮುಂದಿನ ಪ್ರೌಢ ವೃದ್ಧಾವಸ್ಥೆಗಳ ಚಂದ್ರನಿಗೆ ಸಾಧ್ಯವಿದೆ.

ಕೃಷ್ಣಪಕ್ಷದಲ್ಲಿ ದಿವಾಜನನ. ಶುಕ್ಲಪಕ್ಷದಲ್ಲಿ ರಾತ್ರಿ ಜನನ ಶುಭ. ಅಮಾವಾಸ್ಯೆಯ ಚಂದ್ರನಿಗೆ ಸ್ತ್ರೀರಾಶಿಯಲ್ಲಿದ್ದಾಗ ತಾರುಣ್ಯಾನಂತರ ಶುಭ ಫಲ ಕಾಣುವುದು. ಬಾಲ್ಯ ಇಂತಹರಿಗೆ ಕಷ್ಟ ಅಧಿಕವಿದ್ದು ವಯಸ್ಸು ಹೋದಂತೆ ವೃದ್ಧಿಗೊಳ್ಳುತ್ತಿರುವರು. ತಾರುಣ್ಯದ ನಂತರ ಕ್ರಮೇಣ ಉನ್ನತಿ ಯನ್ನು ಪಡೆಯುವರು.

"ಶಿರಸಾ ಚಂದ್ರ ವೃಜೇತ್" ಶಿರಸ್ಸಿನಿಂದ ಚಂದ್ರನು ಉದಯಹೊಂದುವ ನೆಂದು ಈ ಪ್ರಾಚೀನ ಅಭಿಪ್ರಾಯ. ಜನನ ಕಾಲದಲ್ಲಿ ಯಾವ ಅಂಗ ಮೊದಲು ಬಂದುದೆಂದು ತಿಳಿಯುವುದಿದೆ. ಶೀರ್ಷೋದಯ, ಪೃಷ್ಠೋದಯ, ಉಭ ಯೋದಯ ರಾಶಿಗಳೆಂದು ಮೂರು ಬಗೆಯ ರಾಶಿಗಳಿರುವವು. ಮೇಷ, ವೃಷಭ, ಕರ್ಕ, ಧನು, ಮಕರ ರಾಶಿಗಳು ಪೃಷ್ಠೋದಯಗಳು. ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ರಾಶಿಗಳು ಶೀರ್ಷೋದಯ ರಾಶಿಗಳು; ಮೀನ ಉಭಯೋದಯ ರಾಶಿಯು. ಲಗ್ನ ಮತ್ತು ಚಂದ್ರರಾಶಿ ಪೃಷ್ಠ ಹಾಗೂ ಉಭಯೋದಯವಾದರೆ ಹೆರಿಗೆ ಕಷ್ಟ ಸಂಭವಿಸಿದೆಯೆಂದು ತಿಳಿಯ ಬೇಕು. ಶೀರ್ಷೋದಯ ರಾಶಿಯಲ್ಲಿ ಚಂದ್ರ ಮತ್ತು ಲಗ್ನವಿದ್ದರೆ ಹೆರಿಗೆ ಯಲ್ಲಿ ಕಷ್ಟವಾಗುವುದಿಲ್ಲ. ಮೀನ ಉಭಯೋದಯ. ಇದರಲ್ಲಿ ಹೆರಿಗೆಗೆ ತ್ರಾಸ ವಾಗುತ್ತದೆ. ಮಾನವನ ಜಾತಕ ದಶಾಫಲ ಚಿಂತನೆಯಲ್ಲೂ ಶೀರ್ಷ, ಪೃಷ್ಠ, ಉಭಯೋದಯ ಸ್ಥಿತ ಗ್ರಹರ ಮೂಲಕ ಚಿಂತಿಸಬಹುದಾಗಿದೆ. ಶೀರ್ಷೋ ದಯ ರಾಶಿಯ ಗ್ರಹರು ದಶಾರಂಭ ಕಾಲದಲ್ಲಿ ಫಲಕೊಡುವರು. ಪೃಷ್ಠೋ ದಯ ರಾಶಿಯ ಗ್ರಹರು ಅಂತ್ಯಕಾಲದಲ್ಲಿ ದಶಾಫಲವನ್ನು ಕೊಡುವರು. ಉಭಯೋದಯದ ಗ್ರಹರು ಮಧ್ಯಕಾಲದಲ್ಲಿ ಫಲವನ್ನು ಕೊಡುವರು.

"ಪೃಷ್ಠೋಭಯ ಕೋದ ಯಃಕ್ಷರ್ಗಾ ಸ್ವಾಂತ್ಯಾಂತ ಪ್ರಥಮೇಷು ಪಾಕದಾಃ" ಎಂದು ಈ ವಿಷಯವನ್ನು ವರಾಹನು ಹೋರೆಯಲ್ಲಿ ಹೇಳಿರುವನು

"ಸರೀಸೃಪಾಕಾರಯುತಃ ಶತಾಂಕಃ" ಹಾವು ಮೊದಲಾದ ಜೀವಿಗಳ

ಆಕಾರಯುತನು. ಚಂದ್ರನೆಂದು ಸಾರ. ಹಾವುಗಳಲ್ಲಿ ಹಲವು ಜಾತಿಯುವಿನೆ. ಮನಸ್ಸಿನಲ್ಲಿ ವಿಷವಿರಿಸಿ ಹಾವಿನಂತೆ ನಡೆಯುವವರು ಹಲವರು. ಮನಸ್ಸಿನ ಪರಿಣಾಮವನ್ನು ಚಂದ್ರನಿಂದ ತಿಳಿಯಬೇಕಾಗಿದ್ದು ಅವನಿಂದಲೇ ಮನಸ್ಸಿನ ಶುದ್ಧಾಶುದ್ಧತೆಯನ್ನು ಚಿಂತಿಸಬೇಕಿದೆ. ಚಂದ್ರನ ಕೇಂದ್ರದಲ್ಲಿ ಪಾಪಗ್ರಹ ಯೋಗವಿದ್ದರೆ ಮನಸ್ಸು ಶುದ್ಧವಾಗಿರದು.

"ಜಲಾಶ್ರಯಶ್ಚಂದ್ರಃ' ಜಲಾಶ್ರಯ ಸ್ಥಾನ ಚಂದ್ರನಿಗೆಂದು ಸಾರ. ಕೆರೆ, ಬಾವಿ, ಹೊಳೆ, ಸಾಗರ ಸ್ಥಾನಗಳು ಚಂದ್ರನದ್ದು, ವೃತ್ತಿಚಿಂತನೆ ಯಲ್ಲಿ ರಸವಸ್ತು ಬರುವುದು. ನಷ್ಟವಸ್ತು ಚಿಂತನೆಗೆ ಸ್ಥಾನಚಿಂತನೆ ಮುಖ್ಯ. ಚಂದ್ರನು ಜಲರೂಪನಾದ್ದರಿಂದ ಜಲದೇವತೆಯು. ರತ್ನ ಮುತ್ತುಗಳ ಹುಟ್ಟು ಇವನಿಂದಲೇ ಸಾಗರದಲ್ಲಿ ಆಗುತ್ತದೆ. ಆದ್ದರಿಂದ ಮುತ್ತಿನ ವಿಚಾರ ವನ್ನು ಚಂದ್ರನಿಂದ ಮಾಡುವೆವು. ಚಂದ್ರನಿಗೆ ಹೊಸ ವಸ್ತ್ರ ಬಿಳೀ ಬಟ್ಟೆ ಎಂದು ಇನ್ನು ಕೆಲವರು. ವಸ್ತ್ರಾದಿ ಚಿಂತನೆಗೆ ಅನುಕೂಲವಾಗಿ "ವಸ್ತ್ರಂ" ಸ್ಥೂಲಮಭುಕ್ತ ಮಗ್ನಿಕಹತಂಮಧ್ಯಂದೃಢಂ ಸ್ಫಾಟಿತಂ" ಎಂದು ಎಲ್ಲಾ ಗ್ರಹರಿಗೆ ಬೇರೆ ಬೇರೆ ಬಟ್ಟೆಯನ್ನು ವರಾಹನು ಹೇಳಿರುವನು.

. ಚಂದ್ರನಿಗೆ ವರ್ಷಋತುವೆಂದು ಜಾತಕ ಪಾರಿಜಾತಕಾರನು ಹೇಳು ವನು. ವರಾಹನು ದ್ರೇಕ್ಕಾಣ ವಿಭಾಗದಿಂದ ಋತು ನಿರ್ಣಯ ವಿಷಯ ವನ್ನು ಹೇಳಿದ್ದು ಕಂಡುಬರುವುದಲ್ಲದೇ ಆತನೂ ಚಂದ್ರನಿಗೆ ವರ್ಷಋತು ವನ್ನೇ ಹೇಳಿರುವನು. ವರಾಹನ ಹೋರೆಯ ದ್ವಿತೀಯಾಧ್ಯಾಯದ ಹನ್ನೆರ ಡನೆ ಪದ್ಯವನ್ನು ನೋಡಿದರೆ ಈ ವಿಚಾರ ಸ್ಪಷ್ಟವಾಗುವುದು. ಕಾಳಿದಾಸ ನೊಬ್ಬನು ಶರತ್ಕಾಲವನ್ನು ಕೊಟ್ಟಿರುವನು.

ಕಲ್ಯಾಣವರ್ಮನು ಚಂದ್ರನಿಗೆ ವನಪ್ರದೇಶವೆನ್ನುವನು. ಕೆರೆ ಸಮುದ್ರ ಜಲಾಶ್ರಯಸ್ಥಾನ ಚಂದ್ರನದ್ದು. ಅಂಬುಸ್ಥಾನವೆಂದು ವರಾಹನ ಮತ. ಸಂಹಿ ತೆಯಲ್ಲಿ ಅನೇಕ ಸ್ಥಳಗಳನ್ನು ವರಾಹನು ಕೊಟ್ಟಿರುವನು.

ಚಂದ್ರನಿಗೆ, ಶೀತಗುಣ ಶೀತರಕಿಣ, ತಿಗ್ಮರುಚಿ ಎಂದು ಮೊದಲಾಗಿ ವರಾಹನು ಹೇಳುತ್ತಿರುವನು. ಸತ್ವಗುಣ ರಾಜಕಾರಕನೆಂದೂ ಹೇಳುವರು.

ಚಂದ್ರನು ಸ್ತ್ರೀಗ್ರಹನು. ಜಲತತ್ವಕಾರಕನು. ಚಂದ್ರನು ರಕ್ತಕಾರಕ ಗ್ರಹನು. ಮುತ್ತುವಿಷಯದಲ್ಲಿ ವರಾಹನು ಇದನ್ನು ಹೇಳಿರುವನಲ್ಲದೆ ಗ್ರಹಧಾತು ನಿರ್ಣಯದಲ್ಲಿಯೂ ಇದನ್ನೇ ಹೇಳಿರುವನು. ಚಂದ್ರ ಕುಜರು ದೂಷಿತರಾದಾಗ ರಕ್ತಸಂಬಂಧ ದೋಷ ಗಳಾಗುತ್ತವೆ. ಶ್ವಾಸ ವಿಕಾರವೂ ಉಂಟಾಗುವದು. ಚಂದ್ರನು ಬಲಹೀನನಾದರೆ ರಕ್ತಸಂಚಾರ ಸರಿಯಾಗಿ ಉಂಟಾಗದು. ರಕ್ತದ ಕೆಡುವಿಕೆಯಿಂದ ಮಹಾವ್ಯಾಧಿಗಳು ತಲೆದೋರುತ್ತವೆ. ರಕ್ತಸಂಬಂಧ ವ್ಯಾಧಿಯು ತಲೆದೋರುವಾಗ ಚಂದ್ರನು ಗ್ರಹಗಳಿಂದ ದೂಷಿತನಾಗುವನು. ಕುಜನ ಸಂಬಂಧ ಕೆಡಿಸುವಿಕೆಗಿಲ್ಲ. ಕುಜನು ರಕ್ತನಿವಾರಣ ಕಾರಕಗ್ರಹನು. ಚಂದ್ರನಿಗೆ ಕುಜನಿಂದ ನಿರ್ಮಿತವಾದ ರಕ್ತದ ಮೇಲೆ ಪ್ರಭಾವ.

ಚಂದ್ರನು ಲವಣಕಾರಕನು. ಚಂದ್ರನು ಕ್ಷಣಕಾರಕ ಗ್ರಹನು. ಚತುರ್ಥ ಸ್ಥಾನದಲ್ಲಿ ಚಂದ್ರನು ಬಲಿಯೆಂದು ಹೇಳುವರು. "ನಿಶೀಂದುಃ" ರಾತ್ರಿ ಚಂದ್ರನು ಬಲಶಾಲಿಯು. ಗುರುವಿನಿಂದ ಚಂದ್ರನು ಪರಾಜಿತನಾಗುವನೆಂದು ಜಾತಕ ಪಾರಿಜಾತಕದಲ್ಲಿ ಹೇಳಿದ್ದು ಕಾಣುವುದು. "ಗುರುಣಾ ನಿಶಾಕರಃ" ಗುರುವಿನಿಂದ ಚಂದ್ರನು ಪರಾಜಿತನಾಗುವನೆಂದು ಸಾರ. ಗುರು ಚಂದ್ರನ ಗುಣ ನಿರ್ಮೂಲವನ್ನು ಕೆಡಿಸಿ ಅನಿಷ್ಟಫಲಕ್ಕೆ ಕಾರಣನಾಗಿಸುವನು.

"ಚಂದ್ರಃ ಕರ್ಕಿಣಿ ಗೋಪ ತೌಲಿಜಮಿನೇ ದ್ರೇಕ್ಕಾಣ ಹೋರಾಂಶಕೇ ।
ರಾತ್ರ್ಯಂತೇ ಶುಭವೀಕ್ಷಣೇ ನಿಶಿ ಸುವೇ ಯಾಮ್ಯಾಯನೇ ವೀರ್ಯವಾನ್
ಇಂದುಃ ಸರ್ವಕಲಾಧರೋಯದಿ ಬಲೀ ಸರ್ವತ್ರ ಸಂಧಿರ್ವಿನಾ ।
ಸರ್ವವ್ಯೋಮಚರೇಕ್ಷಿತಸ್ತು ಕುರುತೇ ಭೂಪಾಲಯೋಗಂ ನೃಣಾಂ"

ಚಂದ್ರನು ಕರ್ಕಾಟಕ, ವೃಷಭರಾಶಿಗಳಲ್ಲೂ ಸೋಮವಾರ ಮತ್ತು ತನ್ನ ದ್ರೇಕ್ಕಾಣ ಹೋರೆ. ಅಂಶಕಗಳಲ್ಲೂ ರಾತ್ರ್ಯಂತ್ಯದಲ್ಲೂ, ಶುಭದೃಷ್ಟಿಯಿಂದಲೂ, ರಾತ್ರಿಯಲ್ಲೂ, ನಾಲ್ಕರಲ್ಲಿಯೂ, ದಕ್ಷಿಣಾಯನದಲ್ಲೂ, ಬಲಿಷ್ಠನಾಗುವನು. ಪೂರ್ಣಚಂದ್ರನು ನಕ್ಷತ್ರಸಂಧಿಯನ್ನು ಬಿಟ್ಟು ಉಳಿದೆಡೆಯಲ್ಲಿದ್ದರೆ ಬಲಿಯಾಗುವನು. ಎಲ್ಲಾ ಗ್ರಹರೂ ಚಂದ್ರನಿಗೆ ನೋಡಿದರೆ ರಾಜಯೋಗವಾಗುವುದು ಎಂದು ಈ ಮೇಲಿನ ಪದ್ಯದ ಸಾರ.

ವರಾಹನು ಸಂಹಿತೆಯಲ್ಲಿ ಹೇಗಿದ್ದರೆ ಶುಭಕರನೆಂದು “ಪ್ರಾಲೇಯ ಕುಂದ” ಎಂದಾರಂಭಿಸುವ ಪದ್ಯದಲ್ಲಿ ಹೇಳಿರುವನು. ಕುಮುದ, ಮೃಣಾಲಗಳ (ನೈದಿಲೆ ತಾವರೆಗಳ) ಬಿಳುಪಿನಿಂದ ಕೂಡಿದ ಚಂದ್ರನು ತಿಥಿ ನಿಯಮದಿಂದ ವೃದ್ಧಿಕ್ಷಯಗೊಂಡರೂ, ತನ್ನ ಗಮನದಲ್ಲಿ ವಿಕೃತಿಗೊಳ್ಳದಿದ್ದರೂ, ಮಂಡಲ ಕಿರಣಯೋಗಯುಕ್ತನಾಗಿದ್ದರೂ, ಚಂದ್ರನು ಮನುಷ್ಯರಿಗೆ ಜಯಪ್ರದನಾಗುವನು.

“ಯದಿ ಕುಮುದ ಮೃಣಾಲಹಾರ ಗೌರಃ ತಿಥಿನಿಯಮಾತ್ ಕ್ಷಯಮೇತಿವರ್ಧತೇವಾ। ಅವಿಕೃತಮಂಡಲಾಂಶುಯೋಗೀಭವತಿನೃಣಾಂ ವಿಜಯಾಯಶೀತರಶ್ಮಿಃ” ಎಂದು ಈ ವಿಚಾರವನ್ನು ದೈವಜ್ಞ ಕಾಮಧೇನು ಗ್ರಂಥದಲ್ಲಿ ಹೇಳಲಾಗಿದೆ.

ಚಂದ್ರನು ಶುಭ್ರನಾಗಿದ್ದರೆ ಮತ್ತು ಅವನ ಬಿಂಬವು ಏನೂ ವಿಕಾರ ಹೊಂದದಿದ್ದರೆ ಲೋಕಕ್ಕೆ ಶುಭಫಲವು. ಚಂದ್ರನು ಕ್ಷಣಿಕ ಗ್ರಹನು. ಈ ಗ್ರಹನು ಭೂಮಿಯ ಸೇವಕನಂತಿದ್ದು ನಡೆಯುವುದರಿಂದ ಭೂಮಿಯಲ್ಲಿ ಇವನ ಪರಿಣಾಮವೇ ಅಧಿಕರಿಸುವುದು.

ಚಂದ್ರನು ರಾಶ್ಯಾರಂಭದಲ್ಲಿದ್ದರೆ ಶುಭಫಲ ಕಾಣುವುದಿಲ್ಲ. ಆದಿಭಾಗದಲ್ಲಿ ಎರಡುಭಾಗದೊಳಗೆ ಜನನವಾದರೆ ಸಂತಾನಸುಖ ಕಾಣುವುದಿಲ್ಲ. ಏಕಾಂಗಿಯಾಗುವುದೂ ಇದೆ.

> ಪಾಂಡುರೋಗ ಜಲದೋಷ ಕಾಮಿಲಾ ಪೀನಸಾದಿ ರಮಣೀಕೃತಾಮಯೈಃ ।
> ಕಾಲಿಕಾಸುವಾಸಿನೀ ಗಣೈರಾಕುಲಂ ಕುರುತೇತು ಚಂದ್ರಮಾಃ ॥

ಪಾಂಡುರೋಗ, ಜಲದೋಷ, ಕಾಮಿಲೆ, ಪೀನಸ ಮೊದಲಾದ ಸ್ತ್ರೀಕೃತ ವ್ಯಾಧಿಗಳು, ಕಾಲಿಕಾ, ಸ್ತ್ರೀ, ದೇವತಾಜನಿತ ಪೀಡೆಗಳನ್ನು ಚಂದ್ರನು ಕೊಡುವನು.

ವೈದ್ಯನಾಥನು ಚಂದ್ರನಿಗೆ ಎಪ್ಪತ್ತು ವರ್ಷವೆನ್ನುವನು. ಜಯದೇವನು ಮಧ್ಯ ವಯಸ್ಸೆಂದು ಹೇಳುವನು. ಚಂದ್ರನ ಪ್ರಭಾವ ಇಪ್ಪತ್ತೊಂದರಿಂದ ಇಪ್ಪತ್ತೆಂಟು ವರುಷವರೆಗೆ ಕಾಣುವುದು.

William Lely Says:- She is a femine nocturnal planet, cold, moist and phlegmatic.

ಚಂದ್ರನಿಂದ ರಾಜಪೀಡೆ, ಮಾತೃಕೋಪ, ಮಾತೃಪೀಡೆ, ಕಫ, ವಾತ. ರಕ್ತದೋಷದ ರೋಗಗಳೂ ತನ್ನಿಂದ ಶಕ್ತಿವಂತನೊಡನೆ ವಿರೋಧವೂ ದುರ್ಗಾದೇವತೆಯ ಕೋಪವೂ, ಕೃಷಿ, ದ್ರವ್ಯ, ಕೀರ್ತಿ ನಾಶಫಲವೂ ಚಿಂತಿಸತಕ್ಕದಾಗಿವೆ. ಚಂದ್ರನು ಅನಿಷ್ಟಸ್ಥಾನಗೊಂಡರೆ ಮತ್ತು ಅನಿಷ್ಟಸ್ಥಾನದಲ್ಲಿದ್ದು ಅಶಕ್ತನಾಗಿದ್ದರೆ ಈ ಫಲವನ್ನು ಚಿಂತಿಸಬಹುದಾಗಿದೆ.

> "ಕೋಪೋರಾಜ್ಞ್ಯಾ ಜನನ್ಯಾರುರಗಕಫಸಮೀರಾಸ್ರರುಗ್ಭಿರ್ಯವತ್ ಸ್ಯ್ರಾ ।
> ವೈರಂಕೋಶಸ್ತ್ರದೌರ್ಗಕೃಷಿ ಧನಯಶಸಾಂ ಸಂಕ್ಷಯೋಽನಿಷ್ಟಗೆಷ್ಟೇ" ॥

ಎಂದು ಈ ವಿಚಾರದಲ್ಲಿ ಪ್ರಮಾಣವಿದೆ.

> ನಿದ್ರಾಲಸ್ಯ ಕಫಾತಿಸಾರ ಪಿಟಿಕಾ ಶೀತಜ್ವರಂ ಚಂದ್ರಜಾಃ ।
> ಶೃಂಗ್ಯಬ್ಜಾಹತಿಮಗ್ನಿಮಾಂದ್ಯ ಕೃಶತಾಯೋಷಿದ್ವ್ಯಥಾ ಕಾಮಿಲಾ ಚೇತಶ್ಚಾಂತಿ-
> ಮಸೃಗ್ವಿಕಾರಮುದಕಾದ್ಭೀತಿಂ ಚ ಬಾಲಗ್ರಹಾನ್ ದುರ್ಗಾಕಿನ್ನರಧರ್ಮದೈವ-
> ಫಣಭೃ ದ್ಯಕ್ಷಾಚ್ಚ ಪೀಡಾಂ ವದೇತ್ . . (ಪ್ರಶ್ನಮಾರ್ಗ)

ಚಂದ್ರನು ಅನಿಷ್ಟನಾಗಿದ್ದಾಗ ನಿದ್ರೆ ಹೆಚ್ಚಾಗುವುದು. ಆಲಸ್ಯ ತಲೆದೋರುವುದು. ಕಫ, ಅತಿಸಾರ, ಕುರ, ಶೀತಜ್ವರಗಳು ಕಂಡುಬರುವವು ಕೊಂಬಿನ ಪ್ರಾಣಿಗಳ ಉಪದ್ರವ ಜಲಜಂತೂಪದ್ರವ, ಅಗ್ನಿಮಾಂದ್ಯ, ದೇಹ ಕೃಶತೆ, ಸ್ತ್ರೀವ್ಯಥೆ, ಕಾಮಿಲಾರೋಗ, ಆಲೋಚನಾಶಕ್ತಿ ಇಲ್ಲವಾಗುವಿಕೆ, ರಕ್ತದೋಷದಿಂದಾಗುವ ರೋಗಗಳು, ಜಲಭಯ, ಬಾಲಗ್ರಹ ಪೀಡೆ, ದುರ್ಗಾಕೋಪ, ಕಿನ್ನರಕೋಪ, ಧರ್ಮದೇವತಾಕೋಪ, ಸರ್ಪಕೋಪ, ಯಕ್ಷೋಪದ್ರವಗಳುಂಟಾಗುವವು.

> ತನು ವೃತ್ತ ತನುರ್ಬಹು ವಾತ ಕಫಃ ಪ್ರಾಜ್ಞಶ್ಚ ಶಶೀ ಮೃದುವಾಕ್
> ಶುಭದೃಕ್ ॥ (ವರಾಹ)

ಚಂದ್ರನ ಸ್ವರೂಪ ವಿಚಾರವನ್ನು ಮಾಡುವಾಗ ಪುಷ್ಟ ವರ್ತುಲವಾದ ದೇಹ. ಅತಿ ವಾತ ಕಫಮಿಶ್ರಿತ ಪ್ರಕೃತಿ, ಪ್ರಾಜ್ಞ(ವಿದ್ವಾಂಸ)ನಾಗಿರುವಿಕೆ, ಶುಭವಾದ ದೃಷ್ಟಿಯೊಂದು ವರಾಹನು ಹೇಳುತ್ತಿರುವನು ಚಂದ್ರನು ವೃದ್ಧಿ

ಕ್ಷಯಯುಕ್ತನು. ಆದ್ದರಿಂದ ತನು (ಕೃಶ) ದೇಹನೆನ್ನಲಾಗಿದೆ. ಚಂದ್ರನ ಆಕೃತಿ ವರ್ತುಲ(ಉರುಟು)ವಾಗಿದ್ದುದರಿಂದಲೇ ವೃತ್ತನು ಎನ್ನಲಾಗಿದೆ ಬಹು ವಾತ ಕಫ ಪೀಡೆ ಚಂದ್ರನಿಂದಾಗುವುದು. ವಿದ್ವಾಂಸನಾಗಿರುವಿಕೆ ಚಂದ್ರನ ಫಲ. ಚಂದ್ರನಿಗೆ ಮೃದುವಾದ ಮಾತು. ಶುಭವಾದ ದೃಷ್ಟಿ ಎಂಬ ಫಲ ಇನ್ನೂ ವಿಶೇಷದವು. ಚಂದ್ರಪ್ರಧಾನನಾದ ಮನುಷ್ಯನು ಇಲ್ಲವೆ ಚಂದ್ರದಶಾ ಭುಕ್ತಿ ಸಂಪರ್ಕದ ಮನುಷ್ಯನು ಮೃದುವಾಗಿಯೇ ಮಾತನಾಡುವವನು. ಆತನ ದೃಷ್ಟಿ ಕ್ರೂರವಾಗಿರದು.

ಚಂದ್ರನಿಗೆ ಮೃದು ಮಾತಿನೊಂದಿಗೆ ಮೃದು (ಶಾಂತ) ಸ್ವಭಾವ ಕಂಡುಬರುವುದು. ಕಣ್ಣುಗಳು ನೀರಿನ ಹೊಳಪಿನಿಂದ ಕೂಡಿದ್ದು ಜಿಂಕೆಯ ಕಣ್ಣಿನ ಸೌಂದರ್ಯಯುಕ್ತವಾಗಿರುವವು. ಸ್ತ್ರೀಯರ ಕಣ್ಣುಗಳಿಗೆ ಈ ವಿಶೇಷ ಗುಣವನ್ನು ಕೊಡಬಹುದಾಗಿದೆ. ಮಧುರವಾದ ಮಾತಿದ್ದು ಹೆಂಗುಸರ ಕಂಠವಿರುವುದು. ಯಾವಾಗಲೂ ತರುಣನ ನೆಲೆ ಚಂದ್ರನಿಗೆ ವಿದ್ವಾಂಸತನವಿರುತ್ತವಾದರೂ ಲೌಕಿಕ ವ್ಯವಹಾರದಲ್ಲಿ ಸಮರ್ಥರಾಗಿರುವುದಿಲ್ಲ. ಯಾವುದಾದರೂ ಒಂದು ವಿಷಯದಲ್ಲಿ ಪ್ರಾಜ್ಞರಾಗಿರುವರು. ಶರೀರ ಮಾರ್ದವ ಗುಣಯುಕ್ತವಾಗಿರುತ್ತದೆ. ಸಾತ್ವಿಕ ಗುಣ ಕಂಡುಬರುತ್ತದೆ. ವಾತ ಕಫ ರೋಗ ಚಂದ್ರನಿಗೆ. ಶೀತವಿಕಾರ ಇವನಿಂದಲೇ ಉಂಟಾಗುತ್ತಿದೆ. ವಾತ ಉಷ್ಣದ ಮೂಲಕ ಉಂಟಾಗುತ್ತಿರುವುದು.

> ಸೌಮ್ಯಃಕಾಂತ ವಿಲೋಚನೋ ಮಧುರ ವಾಗ್ಗೌರಃ ಕೃಶಾಂಗೋ ಯುವಾ ।
> ಪ್ರಾಂಶುಃ ಸೂಕ್ಷ್ಮನಿಕುಂಚಿತಾಸಿತಕಚಃ ಪ್ರಾಜ್ಞೋ ಮೃದುಃ ಸಾತ್ವಿಕಃ ॥
> ಚಾರುರ್ವಾತಕಫಾತ್ಮಕಃ ಪ್ರಿಯ ಸಖೋರಕ್ತೈಕಸಾರೋಘೃಣೀ ವೃದ್ಧಸ್ತ್ರೀ-
> ಷುರತಸ್ತಲೋಽಶಿ ಸುಭಗಃ ಶುಭ್ರಾಂಬರಶ್ಚಂದ್ರಮಾಃ ॥ (ಸಾರಾವಲೀ)

ಸೌಮ್ಯನೂ, ಸುಂದರವಾದ ಕಣ್ಣುಗಳು ಉಳ್ಳವನೂ, ಮಧುರವಾದ ಮಾತುಳ್ಳವನೂ, ಬಿಳುಪುವರ್ಣದವನೂ, ಕೃಶಕಾಯನೂ, ತರುಣನೂ, ಉನ್ನತ ಶರೀರನೂ, ಸಪೂರವಾದ ಗುಂಗುರಾದ ಕಪ್ಪು ಕೂದಲುಳ್ಳವನೂ, ಬುದ್ಧಿವಂತನೂ, ಮೃದುಶರೀರನೂ, ಸಾತ್ವಿಕಗುಣನೂ, ಚೆಲುವಾದವನೂ, ವಾತಪ್ರಕೃತಿಯೂ, ಸ್ನೇಹಯೋಗ್ಯನೂ, ರಕ್ತಬಲದಿಂದ ಕೂಡಿದವನೂ,

ವಯಸಾಯುಕ್ತನೂ, ವೃದ್ಧಸ್ತ್ರೀರತನೂ, ಚಂಚಲನೂ, ಅತಿ ಸೌಭಾಗ್ಯವಂತನೂ, ಶುಭ್ರವಾದ ಬಟ್ಟೆಯಿಂದ ಕೂಡಿದವನೂ, ಆಗಿ ಚಂದ್ರನಿರುವನು.

ಸಪ್ತಮ ಸ್ಥಾನದ ಸಂಪರ್ಕ ಚಂದ್ರನಿಗಿದ್ದಾಗ ದಾಂಪತ್ಯಕ್ಕೆ ತೊಡಕಿದೆ. ವೃದ್ಧರಾದರೂ ಕಾಮಾಸಕ್ತರಿರುವನು. ಉಚ್ಚದ ಚಂದ್ರನು ಸಪ್ತಮದಲ್ಲಿದ್ದರೆ ಹೆಂಡತಿಯು ಸುಖಕ್ಕೆ ತೊಡಕಿರುವುದು. ವಿವಾಹಾನಂತರ ಹೆಂಡತಿಯ ಆರೋಗ್ಯದ ಕೆಡುಕಿಕೆ ಕೆಲವೊಮ್ಮೆ ಕಾಣುವುದು. ಇನ್ನು ಕೆಲವರಿಗೆ ಶಿರೋಸಂಬಂಧ ಯಾ ಮಾನಸಿಕ ದೌರ್ಬಲ್ಯದ ರೋಗ ಸ್ತ್ರೀಯರಿಗೆ ಕೊಟ್ಟಿದು ಕಾಣುವುದು. ವೃದ್ಧರಾದರೂ ಪುನಃ ವಿವಾಹಿತರಾಗುವರು. ವಿವಾಹಗೊಂಡ ಬಳಿಕ ಸಂತಾನ ಪ್ರಾಪ್ತಿಯು ನಂತರ ಹೆಂಡತಿಯ ಆರೋಗ್ಯ ಹಾಳಾಗುತ್ತಿರುವುದು.

> ಸಂಚಾರಶೀಲೋ ಮೃದುವಾಗ್ವಿವೇಕೀ ಶುಭೇಕ್ಷಣಶ್ಚಾರುತರಸ್ಥಿರಾಂಗಃ ।
> ಸದ್ಯವಧೀಮಾಂಸ್ತನುವೃತ್ತ ಕಾಯಃ ಕಫಾನಿಲಾತ್ಮಾ ಚ ಸುಧಾಕರಃ ಸ್ಯಾತ್ ॥
> (ವೈದ್ಯನಾಥ)

ಸಂಚಾರಶೀಲನೂ, ಮೃದುವಾಕ್ಯವುಳ್ಳವನೂ, ವಿವೇಕಿಯೂ, ಶುಭ್ರವಾದ ಕಣ್ಣುಳ್ಳವನೂ, ಅತಿ ಸುಂದರನೂ, ಸ್ಥಿರವಾದ ಅಂಗವುಳ್ಳವನೂ, ಯಾವಾಗಲೂ ಬುದ್ಧಿವಂತನೂ, ಕೃಶ ವರ್ತುಲ ಶರೀರನೂ, ಕಫ ವಾತ ಪ್ರಕೃತಿಯೂ ಆಗಿ ಚಂದ್ರನು ಭವಿಸುವನೆಂದು ಸಾರ.

> ನಿಶಾಪತಿಃ ವೃತ್ತತನುಃ ಸುನೇತ್ರಃ ಕಫಾನಿಲಾತ್ಮಾ ಕಿಲ ಗೌರವರ್ಣಃ ।
> ಪ್ರಾಜ್ಞೋಽತಿಲೋಲೋಮೃದುವಾಗ್ಘೃಣೀ ಚ ಪ್ರಿಯಪ್ರಿಯೋಽಸೌಖಲು-
> ಶೋಣಿತೌಜಾಃ ॥ (ಜಯದೇವ)

ಚಂದ್ರನು ವೃತ್ತಾಕೃತಿಯು, ಸುನೇತ್ರನು, ಕಫ ವಾತ ಪ್ರಕೃತಿಯು, ಬಿಳಿವರ್ಣದವನು, ಬುದ್ಧಿವಂತನು, ಅತಿ ಚಂಚಲನು. ಮೃದುವಚನನು, ದಯಾವಂತನು, ಸ್ನೇಹಿತರಿಗೆ ಪ್ರಿಯನು, ರಕ್ತದ ಕಾಂತಿಯುಳ್ಳವನೆಂದು ಸಾರ.

> ಚಂದ್ರಃ ಸಿತಾಂಗಃ ಸಮಗಾತ್ರಯಷ್ಟಿಃ ವಾಗ್ಮೀ ಪರಿಧ್ಯಂಗ ವಿವೇಕಯುಕ್ತಃ ।
> ಕ್ವಚಿತ್ಕೃಶಃ ಶೀತಲವಾಕ್ಯಯುಕ್ತಃ ಸತ್ವಾಶ್ರಯೋ ವಾತಾಕಫಾನಿಲಾತ್ಮಾ ॥
> (ಸರ್ವಾರ್ಥ ಚಿಂತಾಮಣಿ)

ಚಂದ್ರನು ಬಿಳಿವರ್ಣದವನು. ಸಮವಾದ ದೇಹಯುಕ್ತನು, ವಾಗ್ಮಿಯು, ವೃತ್ತಾಂಗನು, ವಿವೇಕಿಯು, ಕೃಶನಾಗಿ ಕೆಲವೊಮ್ಮೆ ತೋರುವವನು. ತಗ್ಗಾದ ಮಾತುಳ್ಳವನು, ಸತ್ವಗುಣಿಯು, ವಾತಕಫ ಪ್ರಕೃತಿಯು ಎಂದುಸಾರ.

ಚಂದ್ರನಿಗೆ ರಕ್ತತೇಜಸ್ಸು ಎಂದು ಹೇಳಿದ್ದು ಯೋಗ್ಯವಾಗಿದೆ. ಚಂದ್ರನು ರಾಜಕಾರಕ ಗ್ರಹನು.

Corporature; She generally piesents a fair stature. Whitely coloured, roundface, grey eyes, and a little lowering; much hair both on the head, and face and other parts. Usually one eye a little larger than the other, short hands and fleshy; the whole body inclining to de fleshy; plump. Corpulent,phlegmatic.

ಪಾಶ್ಚಾತ್ಯರ ಮತ ಹೀಗಿದೆ. ಪ್ರೊವೀರಿಯು ಮತವನ್ನು ಅಧಿಕ ಅನುಸರಿಸಿಯೇ ಈ ಮಾತುಗಳಿವೆ. ಆಕೃತಿ ಸೌಂದರ್ಯ ಚೆನ್ನಾಗಿದ್ದು ಬಿಳೀ ವರ್ಣ, ಉರುಟಾದ ಮುಖ ಎಂದು ಹೇಳಿರುವರಾದರೂ ಒಂದು ಕಣ್ಣು ದೊಡ್ಡದು, ಮತ್ತೊಂದು ಸಣ್ಣದು ಎಂದಿರುವರು. ಈ ವಿಚಾರ ಸರಿಹೋಲುವುದಿಲ್ಲ. ಮಿಥುನಕ್ಕೆ ಕಣ್ಣಿನ ವ್ಯತ್ಯಾಸ ತೋರುತ್ತದೆ. ಕೈ ದೇಹಗಳು ಪುಷ್ಟವಾಗಿ ಮಾಂಸಭರಿತವಾಗಿರುವನೆಂದಿರುವರು. ಕೇವಲ ದೇಹ ಮಾರ್ದವತೆಯಿಂದಿರುವುದೆಂದು ತಿಳಿದರೆ ಸಾಕು. ಚತುಷ್ಕೋಣಾಕೃತಿ ಸರಿಹೋಲುವುದಿಲ್ಲ.

ಡಾ॥ ಸಿಮೋನ್ಸ್ ಈರ್- Luna when dignified, the native has manners, a lover of sciences, a searcher and delighter in novelties, naturally inclined to remove his habitaion unstead fast caring for the present times, temorous, prodigal and easily fright-

ened,. loving peace and to live free from the cares of life. When undignified the native is a vagabond idle person hating labour, a drunkard, of no forecast, delighting to live deggarly carelessy, and discontented.

ಚಂದ್ರನು ಯಾವ ಹೊತ್ತು ಚೆನ್ನಾಗಿರುವನೋ ಆ ಕಾಲದಲ್ಲಿ ಲೌಕಿಕ ವ್ಯವಹಾರದಲ್ಲಿ ಹೇಗಿರಬೇಕೆಂಬ ಜ್ಞಾನ ಚೆನ್ನಾಗಿರುವುದು. ಶಾಸ್ತ್ರೀಯಾಸಕ್ತಿ ಇರುವುದು. ಹೊಸ ಹೊಸ ಶೋಧನೆಗೊಂಡು ಆನಂದಗೊಳ್ಳುವನು. ಅಶಾಂತಿಗೊಂಡು ಸ್ಥಾನ ಬದಲಾವಣೆಗೊಳಿಸುವನು. ಅನಿಶ್ಚಿತ ತತ್ಕಾಲ ವಿಚಾರಗೊಳ್ಳುವವನು. ಡಾಂಭಿಕನಾಗಿ ಜನರ ಮೇಲೆ ಅಧಿಕಾರಗೊಳ್ಳುವನು, ಶಾಂತತಾಭಿಲಾಷಿಯು. ಜೀವನವನ್ನು ಕುರಿತು ಗಂಭೀರ ಯೋಚನೆಗೊಳ್ಳುವವನು ಆಗುವನು. ಚಂದ್ರನು ನಿರ್ಬಲಿಯಾಗಿದ್ದರೆ ಡಾಂಭಿಕನೂ ಆಲಸಿಯೂ, ದೇಹಶ್ರಮಗೊಳ್ಳದವನೂ, ಕುಡುಕನೂ, ನಾಳೆಯ ಯೋಜನೆಗೊಳ್ಳದವನೂ, ನಿಶ್ಚಿಂತನೂ, ಭಿಕಾರಿಗಳಂತೆ ಅಸಮಾಧಾನದಿಂದ ಇರುವವನೂ, ಯಾವ ಜಾಗರೂಕತೆಗೊಳ್ಳದವನೂ ಆಗುವನು.

ಮನೆಯವರನ್ನು ಪ್ರೀತಿಸುವ ವರ್ತನೆ ನಿರ್ಬಲನಾದ ಚಂದ್ರನಿಗಿಲ್ಲ. ಹಣದ ಕಡೆಗೆ ಕಣ್ಣು ಸದಾ ಇದ್ದು ಧನದೇವತಾಪೂಜೆ ಮಾಡುವರು. ಹಣಕ್ಕಾಗಿ ಏನೂ ಮಾಡಲು ಹೇಸುವುದಿಲ್ಲ. ಧನಪಿಶಾಚಿಗಳಾಗಿರುವರು. ಹೆಚ್ಚು ಪರಿಶ್ರಮಗೊಳ್ಳದೆ ಧನಲಾಭವನ್ನು ಅಪೇಕ್ಷಿಸುವರು. ಜನರಲ್ಲಿ ಮೈತ್ರಿಯಿಂದಿರುವುದಿಲ್ಲ. ಲಲಿತಕಲಾಭಿರುಚಿ ಇರುತ್ತದೆ. ಕಾವ್ಯ, ನಾಟಕ, ಲೇಖನಾದಿ ಆಸಕ್ತಿ ಇರುತ್ತದೆ. ಅನ್ಯರ ಸುಖದುಃಖದ ಕಡೆಗೆ ಗಮನಿಸುವುದಿಲ್ಲ. ಅನ್ಯರು ಸಂಪತ್ತಿನಿಂದ ಕೂಡಿದಾಗ ಅಸೂಯೆಗೊಳ್ಳುವರು. ಧನಕ್ಕಾಗಿ ಬಂಧುತ್ವ ಸಂಬಂಧವನ್ನು ಕಡಿಯಲು ಹೇಸದವರು ಎನಿಸುವರು. ಕೆಲವೊಮ್ಮೆ ಅವರ ಮಾತೇ ಅವರಿಗೇನೆಂದು ತಿಳಿಯದು. ತಮ್ಮ ಸಂತೋಷ ದುಃಖಾಸೂಯೆಗಳ ಅಮಲಿನಲ್ಲಿ ಏನನ್ನೂ ಮಾತನಾಡುತ್ತಿರುವರೆಂದು ಅವರಿಗೇ ತಿಳಿಯದು. ಯಾರೊಡನೆ ಹೇಗೆ ಮಾತಾಡಬೇಕು ಎಂಬಿತ್ಯಾದಿ ಲೌಕಿಕ

ವ್ಯವಹಾರಜ್ಞಾನ ಕಡಮೆಯಾಗಿರುವುದು.

ಮೇಷದ ಚಂದ್ರನು ಉತ್ತಮ. ವೃಷಭದ ಚಂದ್ರನು ಅತಿ ಕೆಡುಕಿನವ. ಮಿಥುನದ ಚಂದ್ರನು ಸಾಮಾನ್ಯ ಶುಭನು. ಕರ್ಕಾಟಕದ ಚಂದ್ರನು ಕೆಡುಕಿನವನು. ಸಿಂಹದ ಚಂದ್ರನು ಸಾಧಾರಣ ಶುಭನು. ಕನ್ಯಾ ಚಂದ್ರನು ಒಳ್ಳೆಯವನಲ್ಲ. ತುಲಾ ಚಂದ್ರನು ಉತ್ತಮನು. ವೃಶ್ಚಿಕದ ಚಂದ್ರನು ಅತ್ಯುತ್ತಮನು. ಧನುಚಂದ್ರನು ಸಾಧಾರಣನು. ಮಕರದ ಚಂದ್ರನು ಕೆಡುಕಿನವನು. ಕುಂಭಚಂದ್ರನು ಒಳ್ಳೆಯವನಲ್ಲ. ಮೀನರಾಶಿ ಚಂದ್ರನು ಒಳ್ಳೆಯವನು. ಪುರುಷರಾಶಿಯ ಚಂದ್ರನಲ್ಲಿ ಕುಂಭ ಚಂದ್ರನು ಪ್ರಯೋಜನಕಾರಿಯಲ್ಲ. ಸ್ತ್ರೀರಾಶಿಯ ಚಂದ್ರನಲ್ಲಿ ಮೀನರಾಶಿಯ ಚಂದ್ರನು ಚೆನ್ನಾಗಿರುವನು.

ಸ್ತ್ರೀ ಪುರುಷರ ಜಾತಕದಲ್ಲಿ ಚಂದ್ರ ಶುಕ್ರರು ಇಬ್ಬರೂ ಸಮಸಪ್ತಕ ಯೋಗ ಸ್ತ್ರೀರಾಶಿಯಲ್ಲಿದ್ದು ಹೊಂದಿದರೆ ದಾಂಪತ್ಯ ಜೀವನ ಸುಖಮಯವಾಗಿರುವುದಿಲ್ಲ.ಕರ್ಕಲಗ್ನಕ್ಕೆ ಸಪ್ತಮದ ಚಂದ್ರನು ಚೆನ್ನಾಗುವುದಿಲ್ಲ.ಅಂತೆಯೇ ವೃಶ್ಚಿಕ ಲಗ್ನಕ್ಕೆ ವೃಷಭದ ಶುಕ್ರನೂ, ಚಂದ್ರನೂ ಶುಭರಲ್ಲ. ವೃಶ್ಚಿಕದಲ್ಲಿ ಚಂದ್ರನಿದ್ದು ಸಪ್ತಮದ ಶುಕ್ರನಿದ್ದರೆ ಮನಸ್ತಾಪಾದಿಗಳಿರದೆ ಕಾರಣಾಂತರಗಳಿಂದ ವೃತ್ತಿಯ ಮೂಲಕ ದಂಪತಿಗಳಿಗೆ ಪರಸ್ಪರ ವಿಯೋಗ ಅಲ್ಪಕಾಲವಿರುವುದು.

ಚಂದ್ರನಿಗೆ ಕರ್ಮ(ಕ್ರಿಯೆ) ಅವಸ್ಥೆ ವೇಲಾ ಎಂಬ ಮೂರು ಫಲ ವಿಷಯಗಳು ಇರುತ್ತವೆ. ಅವನ್ನು ನಕ್ಷತ್ರದಿಂದ ಚಿಂತಿಸಬೇಕು. ಈ ವಿಷಯವನ್ನು ವಿದ್ಯಾಮಾಧವನು ಹೇಳಿರುವನು.

> ಇಂದೋರ್ಲಿಪ್ತಾ ಯಾSSಕಾಶಃಭೈರ್ಹೃತ್ವಾ ಶಿಷ್ಟಾಲಿಪ್ತಿಕಗ್ನ್ಯಂಕೈಃ ।
> ಹೃತ್ವಾ ಯಾಥಲ್ಲಬ್ಧಾತ್ರೈರ್ಲಬ್ಧಾ ಕರ್ಮಾವಸ್ಥಾ ವೇಲಾ ಜ್ಞೇಯಾಃ ॥

ಚಂದ್ರಸ್ಫುಟವನ್ನು ಲಿಪ್ತಿಮಾಡಿ ಎಂಟುನೂರರಿಂದ ಭಾಗಿಸಿ ಶಿಷ್ಟವಾದುದನ್ನು ಮೂರು ಕಡೆಯಲ್ಲಿರಿಸುವುದು. ಆಮೇಲೆ ಮೊದಲನೆಯದನ್ನು ಹದಿನೈದರಿಂದಲೂ ಎರಡನೆಯದನ್ನು ನೂರರಿಂದಲೂ, ಮೂರನೆಯದನ್ನು

ಒಂಭತ್ತರಿಂದಲೂ ಗುಣಿಸಬೇಕು. ಮೂರನ್ನೂ ಆನೇಲೆ ಇಪ್ಪತ್ತರಿಂದ ಭಾಗಿಸಿ ಬಂದುದಕ್ಕೆ ಒಂದನ್ನು ಕೂಡಿಸಬೇಕು. ಅವು ಅನುಕ್ರಮವಾಗಿ ಕರ್ಣಾವಸ್ಥಾ ವೇಲಾ ಎಂಬವುಗಳಾಗುವವು.

ಜನ್ಮನಕ್ಷತ್ರ ವಿಘಟಿಜ್ಞಾನಾಂಗೈರ್ನಯೈರ್ಭಜೇತ್ ಲಬ್ಧಾಶ್ಚಂದ್ರ-
ಕ್ರಿಯಾವಸ್ಥಾ ವೇಲಾಖ್ಯಾಸ್ತತ್ಪಲಂಕ್ರಮಾತ್ (ಮಂತ್ರೇಶ್ವರ)

ಜನ್ಮನಕ್ಷತ್ರ ವಿಘಟಿಯನ್ನು ಅರುವತ್ತು, ಮುನ್ನೂರು, ನೂರುಗಳಿಂದ ಭಾಗಿಸಿದರೆ ಕ್ರಮವಾಗಿ ಚಂದ್ರಕ್ರಿಯೆ, ಚಂದ್ರಾವಸ್ಥೆ, ಚಂದ್ರವೇಲಿಗಳು ಆಗುವವು.

ಸ್ಥಾನಾಭ್ರಷ್ಟಸ್ತಪಸ್ವೀ ಪರಯುವತಿರತಸ್ತಸ್ಕರೋ ಹಸ್ತಿಮುಖ್ಯಾ-
ರೂಢಸ್ಸಿಂಹಾಸನಸ್ಥೋ ನರಪತಿರರಿಹಾ ದಂಡನೇತಾ ಗುಣೀ ಚ ।
ನಿಷ್ಪ್ರಾಣಶ್ಛಿನ್ನಮೂರ್ಧಾಕ್ಷತಕರಚರಣೋ ಬಂಧನಸ್ಥೋ ವಿನಷ್ಟೋ
ರಾಜಾವೇದಾನಧೀತೇ ಸ್ವಪಿತಿ ಸುಚರಿತಂ ಸಂಸ್ಮರನ್ ಧರ್ಮಕರ್ತಾ ॥
ಸದ್ವಂಶೋ ನಿಧಿಸಂಗತಃ ಪ್ರಿತತುಲೋ ವ್ಯಾಖ್ಯಾಪರಸ್ತುತ್ತುಪಾರೋಗೀ
ಶತ್ರುಜಿತಃ ಸ್ವದೇಶಚಲಿತೋ ಭೃತ್ಯೋವಿನಷ್ಟಾರ್ಥಕಃ ।
ಆಸ್ಥಾನೀ ಚ ಸುಮಂತ್ರಕಃ ಪರಮಹೀಹರ್ತಾ ಸಭಾಯೋಗಜತ್ರಸ್ತಃ
ಸಂಯುಗಭೀತಿವಾನತಿಭಯೋಽಲೀನೋಽನ್ನದಾತಾಽಗ್ನಿಗಃ ॥

ಕ್ಷುದ್ಧ್ಯಾಧಾಸಹಿತೋಽನ್ನಮತ್ತಿ ವಿಚರನ್ ಮಾಂಸಾಶನೋಽಸ್ತ್ರಕ್ಷತಃ
ಸೋದ್ವಾಹೋ ಧೃತಕಂದುಕೋ ವಿರಹತಿ ದ್ಯೂತೈರ್ನೃಪೋದುಃಖಿತಃ ।
ಶಯ್ಯಾಸ್ಥೋ ರಿಪುಸೇವಿತಶ್ಚ ಸಸುಹೃತ್ ಧ್ಯಾನೀ ಚ ಭಾರ್ಯಾನ್ವಿತೋ
ಮೃಷ್ಟಾಶೀ ಚ ಪಯಃ ಪಿಬನ್ ಸುಕೃತಕೃತ್ ಸ್ವಸ್ಥಸ್ತಥಾಽಽಸ್ತೇ ಸುಖವತ್ ॥

ಏತಾಶ್ಚಂದ್ರಕ್ರಿಯಾಃ ಪಂಚ ಪಂಚ ಮೇಷಾದಿಷು ರಾಶಿಷು ।
ಪ್ರಕಲ್ಪ್ಯ ತತ್ಸಮಂ ಬ್ರೂಯಾತ್ ಸರ್ವಕಾರ್ಯೇಷು ತತ್ಫಲಮ್ ॥
(ವಿದ್ಯಾಮಾಧವೀಯ ಅಧ್ಯಾಯ 2. ಪ, 74, 75, 76, 77)

(1) ಸ್ಥಾನಭ್ರಷ್ಟನು (2) ತಪಸ್ವಿಯು (3) ಪರಯುವತಿ ರತನು (4) ತಸ್ಕರನು-ಕಳ್ಳನು (6) ಹಸ್ತಿಮುಖ್ಯರೂಢನು-ಶ್ರೇಷ್ಠವಾದ ಆನೆಯ ಮೇಲಿರುವವನು (6) ಸಿಂಹಾಸನಸ್ಥನು-ಸಿಂಹಾಸನಾಧಿಪತಿಯು (7) ನರಪತಿ-ರಾಜಶ್ರೇಷ್ಠ (8) ಅರಿಹಾ-ಶತ್ರುಗಳನ್ನು ನಾಶಗೊಳಿಸುವವನು

(9) ದಂಡನೇತಾ-ಸೇನಾಪತಿ (10) ಗುಣೀ-ಗುಣಿಯು (11)ನಿಷ್ಪ್ರಾಣ-ಜೀವ ವಿಲ್ಲದವನು (12) ಛಿನ್ನಮೂರ್ಧಾ-ಗಾಯಗೊಂಡ(ತುಂಡಾದ) ತಲೆಯುಳ್ಳ ವನು (13) ಕ್ಷತಕರಚರಣಃ-ಗಾಯಗೊಂಡ ಕೈಕಾಲುಗಳುಳ್ಳವನು (14) ಬಂಧನಸ್ಥ-ಸೆರೆಯಲ್ಲಿರುವವನು (15) ವಿನಷ್ಟಃ-ನಷ್ಟದಿಂದ ಕೂಡಿದವನು (16) ರಾಜನು (17) ವೇಧಾನಧೀತೇ-ವೇದಗಳನ್ನು ಕಲಿಯುವನು (18) ಸ್ವಪಿತಿ-ನಿದ್ದೆಗೊಳ್ಳುತ್ತಾನೆ (19) ಸುಚರಿತಂಸಸ್ಮರನ್-ಸುಚರಿತಸಿರೂಪ ಕನ್ನು ಉತ್ತಮ ಚರಿತೆಯನ್ನು ನೆನೆಯುತ್ತಿರುವವನು (20) ಧರ್ಮಕರ್ತಾ-ಧರ್ಮಕರ್ತೃ (21) ಸದ್ವಂಶ್ಯ-ಉತ್ತಮ ವಂಶದವನು (22) ನಿಧಿಸಂ ಗತಃ-ನಿಧಿಯನ್ನು ಹೊಂದಿದವನು (23) ಶ್ರುತತುಲಃ-ತಕ್ಕೆನಿಯನ್ನು ಪಡಿ ದವನು (24) ವ್ಯಾಖ್ಯಾಪರ-ವ್ಯಾಖ್ಯಾನಾಸಕ್ತನು (ಭಾಷಣಾಸಕ್ತನು) (25) ಶತ್ರುಹಾ-ಶತ್ರುಸಂಹಾರಕನು (26) ರೋಗೀ-ರೋಗಿಯು (27) ಶತ್ರು ಜಿತಃ-ಶತ್ರುಗಳಿಂದ ಜಯಿಸಲ್ಪಟ್ಟವನು (28)ಸ್ವದೇಶಚಲಿತಃ-ಸ್ವದೇಶ ಬಿಟ್ಟ ವನು (29) ಭೃತ್ಯಃ-ಸೇವಕನು (30)ವಿನಷ್ಟಾರ್ಥಕಃ-ಸಂಪತ್ತು ನಷ್ಟಗೊಳ್ಳು ವವನು (31) ಆಸ್ಥಾನೀ-ರಾಜಸಭೆಯವನು (32) ಸುಮಂತ್ರಕಃ-ಉತ್ತಮ ಮಂತ್ರಿಗಳಿಂದ ಕೂಡಿದವನು (33) ಪರಮಹೀಪಹರ್ತಾ-ಅನ್ಯರ ರಾಜ್ಯವನ್ನು ಹರಿಸಿಆಳುವವನು(34)ಸಭಾರ್ಯಃ-ಹೆಂಡತಿಯಿಂದ ಕೂಡಿದವನು(35)ಗಜ ತ್ರಸ್ತಃ-ಆನೆಯಿಂದ ಹೆದರಿದವನು (36)ಸಂಯುಗಭೀತಿವಾನ್-ಯುದ್ಧಭೀತಿ ಯುಳ್ಳವನು(37)ಅತಿಭಯಃ-ತುಂಬಾ ಭಯದಿಂದ ಕೂಡಿದವನು(38)ಲೀನಃ -ಅಡಗಿರುವವನು (39)ಅನ್ನದಾತಾ-ಅನ್ನದಾನವಮಾಡುವವನು (40)ಅಗ್ನಿಗಃ-ಬೆಂಕಿಯಲ್ಲಿ ಚಲಿಸುವವನು (41) ಕ್ಷುದ್ಬಾಧಾಸಹಿತಃ-ಹಸಿವಿನ ಪೀಡೆಯಿಂದ ಕೂಡಿದವನು (42)ಅನ್ನಮುಕ್-ಅನ್ನಉಣ್ಣುತ್ತಿರುವನು(43)ವಿಚರನ್-ಸಂಚ ರಿಸುತ್ತಿರುವವನು(44)ಮಾಂಸಾಶನಃ-ಮಾಂಸಭೋಕ್ತೃವು(45)ಅಸ್ತ್ರಕ್ಷತಃ -ಬಾಣದಿಂದ ಗಾಯಗೊಂಡವನು (46) ಸೋದ್ವಾಹಃ-ವಿವಾಹದಿಂದಕೂಡಿದ ವನು (47) ಧೃತ-ಧರಿಸಿದ ಕಂದುಕ-ಚೆಂಡುಳ್ಳವನಾಗಿ, ವಿಹರತಿ-ವಿಹರಿ ಸುತ್ತಾನೆ (48) ದ್ಯೂತೈಃ-ಜೂಜಾಟಗಳಿಂದ ಕೂಡಿದವನು (49) ನೃಪಃ -ರಾಜನು (50) ದುಃಖಿತಃ-ದುಃಖಿತನು (51) ಶಯ್ಯಾಸ್ಥಃ-ಹಾಸಿಗೆ

ಯುಕ್ತಿಳ್ಳವನು (52) ರಿಪುಸೇವಿತಶ್ಚ-ಶತ್ರುಗಳಿಂದ ಸೇವೆಗೊಂಡವನೂ ಕೂಡ (53) ಸಸುಹೃತ್-ಗೆಳೆಯರಿಂದ ಕೂಡಿದವನು (54) ಧ್ಯಾನೀ-ಧ್ಯಾನದಿಂದ ಕೂಡಿದವನು (55) ಭಾರ್ಯಾನ್ವಿತಃ-ಹೆಂಡತಿಯಿಂದ ಕೂಡಿದ ಗೃಹಸ್ಥಧರ್ಮದವನು (56) ಮೃಷ್ಟಾಶೀಃ-ಮೃಷ್ಟಾನ್ನವುಣ್ಣುವವನು (57) ಪಯಃಪಿಬನ್-ಹಾಲನ್ನು ಕುಡಿಯುವವನು (58) ಸುಕೃತಕೃತ್-ಅತಿಥಿಪೂಜೆ ಪುಣ್ಯಕಾರ್ಯಗಳನ್ನು ಮಾಡುವವನು (59) ಸ್ವಸ್ಥಃ-ಆರೋಗ್ಯವಂತನು (60) ಸುಖಂಆಸ್ತೇ-ಸುಖವಾಗಿ ಇರುವವನು ಇವು ಮೇಷಾದಿ ಒಂದೊಂದು ರಾಶಿಗಳಲ್ಲಿ ಐದೈದು ಚಂದ್ರಕ್ರಿಯೆಗಳಾಗುವವು. ಅವನ್ನು ಸರಿಯಾಗಿ ಕಲ್ಪಿಸಿ ಎಲ್ಲಾ ಕಾರ್ಯಗಳಲ್ಲೂ ಅವುಗಳ ಫಲವನ್ನು ಹೇಳಬೇಕು.

## ಚಂದ್ರಾವಸ್ಥೆ.

ಆತ್ಮಸ್ಥಾನಾತ್ಪ್ರವಾಸೋ ಮಹಿತನೃಪಪದಾಸಕ್ತತಾ ಪ್ರಾಣಹಾನಿರ್ಭೂಪಾಲತ್ವಂ ಸ್ವವಂ-
ಶೋಚಿತಗುಣನಿರತಿಃ ರೋಗ ಅಸ್ಥಾನಗತ್ವಮ್ ।
ಭೀತಿಃ ಕ್ಷುದ್ವ್ಯಾಧಿತತ್ವಂ ಯುವತಿ ಪರಿಣಯೋರಮ್ಯಶಯ್ಯಾನುಷಕ್ತಿ। ಮೃಷ್ಟಾಶಿತ್ವಂ
ಚ ಗೀತಾ ಇತಿ ಭವನವಶಾತ್ ಸದ್ಭಿರಿಂದೋರವಸ್ಥಾಃ ॥

(ವಿದ್ಯಾಮಾಧವೀಯ ಅಧ್ಯಾಯ ೩ ಪದ್ಯ 78)

(1) ಆತ್ಮಸ್ಥಾನಾತ್ ಪ್ರವಾಸಃ-ಸ್ವಸ್ಥಾನದಿಂದ ಪ್ರವಾಸ (2) ಮಹಿತ-ಪೂಜಿಸಲ್ಪಟ್ಟ, ನೃಪ-ರಾಜನ, ಪದ-ಸ್ಥಾನದಲ್ಲಿ, ಆಸಕ್ತತಾ-ಆಸಕ್ತಿ ಇರುವಿಕೆ (3) ಪ್ರಾಣಹಾನಿ (4) ಭೂಪಾಲತ್ವ-ರಾಜತ್ವ (5) ಸ್ವವಂಶೋಚಿತಗುಣನಿರತೀ-ತನ್ನ ವಂಶಕ್ಕೆ ಯೋಗ್ಯವಾದ ಗುಣದಲ್ಲಿ ಆಸಕ್ತನಾದವನು (6) ರೋಗಿಯು (7) ಅಸ್ಥಾನಗತ್ವಂ-ಅಸ್ಥಾನದಲ್ಲಿರುವವನು (8) ಭೀತಿ (9) ಕ್ಷುದ್ವ್ಯಾಧಿತತ್ವಂ ಹಸಿವಿನ ಬಾಧೆಯಿಂದ ಕೂಡಿದವನು (10) ಯುವತಿಪರಿಣಯಃ-ಯುವತಿಯ ಮದುವೆ ಗೃಹಸ್ಥಧರ್ಮಯುಕ್ತನು (11) ರಮ್ಯಶಯ್ಯಾನುಷಕ್ತಿಃ-ರಮ್ಯವಾದ ಹಾಸಿಗೆಯಲ್ಲಿ ಆಸಕ್ತಿಯುಳ್ಳವನು, (12) ಮೃಷ್ಟಾಶಿತ್ವಂ-ಮೃಷ್ಟಭೋಜನಗೊಳ್ಳುವವನು ಎಂದು ಚಂದ್ರಾವಸ್ಥೆಗಳು.

## ಚಂದ್ರವೇಲಾ ಫಲ.

ಮೂರ್ಧ್ನಾಽಽಮಯೋ ಮುದಿತತಾ ಯದನಂ ಸುಖಾಽಽಸ್ಯಾನೇತ್ರಾಽಽಮಯಃ ಸುಖಿ-
ತತಾ ವನಿತಾವಿಹಾರಃ।

ಉಗ್ರಜ್ವರಃ ಕನಕಭೂಷಣಮಶ್ರುಮೋಕ್ಷಃ ಕ್ಷ್ವೇಳಾಶನಂ ನಿಧುವನಂ ಜಠರಸ್ಯ ರೋಗಃ ।
ಕ್ರೀಡಾ ಜಲೇ ಹಸನಚಿತ್ರ ವಿಲೇಖನೇ ಚ ಕ್ರೋಧಶ್ಚ ನೃತ್ತಕರಣಂ ಘೃತ ಭುಕ್ತಿ ನಿದ್ರೇ
ಗಾನಕ್ರಿಯಾ ದಶನರುಕ್ಕಲಹಃ ಪ್ರಯಾಣಮುನ್ಮತ್ತತಾಽಥ ಸಲಿಲಾಽಽಪ್ಲವನಂ ವಿರೋಧಃ ।
ಸ್ವೇಚ್ಛಸ್ಥಾನಂ ಕ್ಷುದ್ಭಯಂ ಶಾಸ್ತ್ರಲಾಭಃ ಸ್ವೈರಂ ಗೋಷ್ಠೀಯೋಧನಂ ಪುಣ್ಯಕರ್ಮ ।
ಪಾಪಾಚಾರಃ ಕ್ರೂರಕರ್ಮ ಪ್ರಹರ್ಷಃ ಪ್ರಾಜ್ಞೈರೇತಾಶ್ಚಂದ್ರವೇಲಾಃ ಪ್ರದಿಷ್ಟಾಃ ॥

(1) ಮೂರ್ಧಾಮಯಃ-ಶಿರೋರೋಗ (2)ಮುದಿತತಾ-ಸಂತೋಷದಿಂದಿರುವಿಕೆ (3) ಯಜನಂ-ಯಾಗ ಮಾಡುವಿಕೆಯು (4)ಸುಖಾಽಽಸ್ಥಾ-ಸುಖಾಸಕ್ತಿ (5)ನೇತ್ರಾಽಽಮಯಃ-ಕಣ್ಣಿನರೋಗ (6) ಸುಖಿತತಾ-ಸುಖಸ್ಥಿತಿ (7) ವನಿತಾವಿಹಾರಃ-ಸ್ತ್ರೀಕ್ರೀಡೆ (8) ಉಗ್ರಜ್ವರಃ-ಕಠಿಣಜ್ವರವು (9) ಕನಕಭೂಷಣಂ-ಚಿನ್ನಾಭರಣವು(10)ಅಶ್ರುಮೋಕ್ಷಃ-ಕಣ್ಣೀರಿಡುವಿಕೆ(ಅಳುವಿಕೆ) (11) ಕ್ಷ್ವೇಳಾಶನಂ-ವಿಷಭೋಜನ (12) ನಿಧುವನಂ-ಸ್ತ್ರೀಸಂಸರ್ಗ (13) ಜಠರಸ್ಯರೋಗಃ-ಉದರರೋಗ (14) ಜಲೇಕ್ರೀಡಾ-ನೀರಾಟ (15)ಹಸನ-ನಗುವಿಕೆ (16) ಚಿತ್ರವಿಲೇಖನ-ಚಿತ್ರಬರೆಯುವಿಕೆ (17) ಕ್ರೋಧ-ಸಿಟ್ಟು (18) ನೃತ್ತಕರಣಂ-ನೃತ್ಯಮಾಡುವಿಕೆ (19) ಘೃತಭುಕ್ತಿ-ತುಪ್ಪ ಉಣ್ಣುವಿಕೆ (20) ನಿದ್ರೆ-ನಿದ್ದೆ (21) ಗಾನಕ್ರಿಯಾ-ಗಾಯನ ಮಾಡುವಿಕೆ (22) ದಶನರುಕ್-ಹಲ್ಲಿನರೋಗ (23) ಕಲಹ (24) ಪ್ರಯಾಣ (25) ಉನ್ಮತ್ತತಾ-ಉನ್ಮತ್ತತೆ (26) ಸಲಿಲಾಽಽಪ್ಲವನಂ-ನೀರಲ್ಲಿ ಹಾರುವಿಕೆ (27) ವಿರೋಧ (28) ಸ್ವೇಚ್ಛಸ್ಥಾನಂ-ಸ್ವತಂತ್ರ ವೃತ್ತಿ (29) ಕ್ಷುದ್ಭಯ-ಹಸಿವಿನ ಭಯ (30)ಶಾಸ್ತ್ರಲಾಭ (31) ಸ್ವೈರಂ-ಸುಖವಾಗಿ ಮನಬಂದಂತೆ ವಿಹರಿಸುವಿಕೆ (32) ಗೋಷ್ಠಿ-ಸಭೆಗೂಡಿರುವಿಕೆ (33)ಪುಣ್ಯಕರ್ಮ (34)ಪಾಪಾಚಾರಃ-ಪಾಪಕೃತ್ಯದವನು (35) ಕ್ರೂರಕರ್ಮ (36) ಪ್ರಹರ್ಷಃ-ಅತಿಸಂತೋಷವು ಎಂದು ಚಂದ್ರವೇಲಾಫಲಗಳನ್ನು ವಿದ್ವಾಂಸರಿಂದ ಹೇಳಲಾಗಿದೆ.

ಜಾತಕೇ ಚ ಮುಹೂರ್ತೇ ಚ ಪ್ರಶ್ನೇ ಚಂದ್ರಕ್ರಿಯಾ ರಯಃ ।
ಸಮ್ಯಕ್ಫಲಪ್ರದಾಸ್ತಸ್ಮಾ ದ್ವಿಶೇಷೇಣ ವಿಚಿಂತಯೇತ್ । (ಮಂತ್ರೇಶ್ವರ)

ಚಂದ್ರಕ್ರಿಯೆ ಮೊದಲಾದುವನ್ನು ಜಾತಕ, ಮುಹೂರ್ತ, ಪ್ರಶ್ನೆ, ಗಳಲ್ಲಿ ಚೆನ್ನಾಗಿ ಫಲವನ್ನು ಕೊಡುವವಾದ ಕಾರಣ ಚಿಂತಿಸಬೇಕು.

ಪಕ್ಷೋದ್ಭವಂ ಹಿಮಕರಸ್ಯ ವಿಶಿಷ್ಟಮಾಹುಃ ಸ್ಥಾನೋದ್ಭವಂ ತು ಬಲಮಭ್ಯಧಿಕಂ ಪರೇಷಾಮ್ ।

ತತ್ಸಂಪ್ರಯುಕ್ತಮಿತರೈರಧಿಕಾಧಿಕಂ ಸ್ಯಾದನ್ಯಾನಿ ತೇನಸದೃಶಾನಿ ಬಹೂನಿಚೇತ್ಸ್ಯು॥
(ಫಲದೀಪಿಕಾ)

ಚಂದ್ರನಿಗೆ ಪಕ್ಷಬಲವೂ ಅನ್ಯರಿಗೆ ಸ್ಥಾನಬಲವೂ ವಿಶಿಷ್ಟವಾದುವು. ಇತರ ಬಲಗಳೂ ಕೂಡಿ ಇದ್ದರೆ ಈ ಫಲ ಅಧಿಕವಾಗುವುದು.

### 4. ರಾಶಿಗುಣ ಶೀಲ — ಮೇಷ

ಮೇಷ ಎಂಬ ಪದಕ್ಕೆ ಆಡು ಎಂಬ ಅರ್ಥ. ಆಡು ಚರಜೀವಿ ಆಡಿನ ಗುಣಧರ್ಮ ಈ ರಾಶಿಯವನದು. ಆಡು ಪರೋಪಕಾರ ಜೀವಿ. ಅದರ ಆಹಾರ ಅಲ್ಪವಾದ ವನಸ್ಪತಿಗಳು. ಅಂತೆಯೇ ಈ ರಾಶಿಯ ಮನುಷ್ಯನು ತನ್ನ ಉದರ ವಿಷಯದಲ್ಲಿ ಹೆಚ್ಚು ಶ್ರಮವಹಿಸುತ್ತಿಲ್ಲ. ಹೋದಲ್ಲಿ ಬಂದಲ್ಲಿ ಅತನಿಗೆ ಬೇಕಾದ ಆಹಾರ ಸಂಪತ್ತು ದೊರೆಯುವುದು. ಸಂಚಾರಶೀಲ ಪ್ರಾಣಿ ಅಂತೆಯೇ ಈ ಮನುಷ್ಯನು ಇದ್ದಲ್ಲಿದ್ದರೂ ತಿರುಗಾಟ ಅಧಿಕಗೊಳ್ಳುತ್ತಿರುವನು. ಅನ್ಯರಿಂದ ಬಂಧನಕ್ಕೊಳಗಾಗುವನು, ಆಡು ಚತುಷ್ಪಾದ ಪ್ರಾಣಿ. ಎರಡು ಕೋಡು, ಒಂದು ಬಾಲ, ಉದ್ದ ಮುಖ, ದೇಹದಲ್ಲಿ ದಪ್ಪವಾದ ರೋಮಗಳಿಂದ ಕೂಡಿದ ಇದರ ಆಕೃತಿ ಕಾಣುವುದು. ಇದು ತನ್ನ ಆಹಾರವನ್ನು ಹುಡುಕುತ್ತಾ ಸಂಚರಿಸುವುದು. ಅಂತೆಯೇ ಈ ರಾಶಿಯವರು ತನ್ನ ಆಹಾರ ಸಂಪತ್ತಿನ ಹುಡುಕಾಟಕ್ಕಾಗಿ ಹೋಗುತ್ತಿರುವರು. ಹೆಣ್ಣು ಆಡನ್ನು ಹೊಂದಿದ ಬಳಿಕ ಗಂಡು ಆಡು ಅದರ ಹಿಂದೆಯೇ ಹೋಗುತ್ತಿರುವುದು. ಬೇರೆ ಆಡುಗಳನ್ನು ತನ್ನ ಬಳಿ ಬರಲು ಬಿಡುವುದಿಲ್ಲ. ಆಡು ಅತಿ ಕಾಮುಕ ಜೀವಿ. ಸಣ್ಣ ಗಂಡು ಆಡೂ ಬೆಳೆಯುವುದರೊಳಗೇ ಕಾಮಾಸಕ್ತಿಯನ್ನು ತೋರುತ್ತದೆ. ಗಂಡು ಆಡಿಗಿಂತ ಹೆಣ್ಣು ಆಡು ಕಾಮವಾಸನೆ ಕಡಿಮೆಯುಳ್ಳದು ಹೆಣ್ಣು ಆಡು ಗರ್ಭಕಾಲದಲ್ಲಿ ಮನುಷ್ಯನ ಭೋಗಕ್ಕೂ ಬರುವುದೆಂದು ಹೇಳುತ್ತಿರುವರು. ಬೇರೆ ಸಮಯ ಗಂಡುಸನ್ನು ತನ್ನ ಹತ್ತಿರ ಬರಬಿಡುವುದಿಲ್ಲವೆಂದೂ ಹೇಳುವರು. ಮೇಷ ರಾಶಿಯು ಮನುಷ್ಯನ ಕಾಮ ವಿಚಾರವನ್ನು ಅಂಶಕದ ಮೂಲಕವೇ ತಿಳಿಯಬೇಕಿದೆ.

ಮೇಷ, ಚರ, ಅಗ್ನಿ ತತ್ವರಾಶಿ, ಚತುಷ್ಪಾದ ರಾಶಿ, ಹಗಲು ಹೊತ್ತು ತುಂಬಾ ಸ್ಥಾನಗಳಿಗೆ ಹೋಗುವುದು. ರೂಕ್ಷ ಸ್ವಭಾವದಿಂದ ಕೂಡಿರು

ಜನರಿಂದ ಕೂಡಿದ್ದರೂ ಏಕಾಂಗಿಯಾಗಿ ಆತನು ದುಡಿಯಬೇಕಾಗುತ್ತದೆ. ಇಂತಹ ದುಡಿತ ಈ ರಾಶಿಯವರ ಪಾಲಿಗೆ ಸೇರಿರುತ್ತದೆ. ತ್ಯಾಗ-ಉದಾರತನ ಇದರಿಂದ ಕಂಡು ಬರುವುದು.

## ವೃಷಭ-

ವೃಷಭ ಕಾಲಪುರುಷನ ಮುಖರಾಶಿ. ವೃಷಭ ಎಂಬ ಪದವು ಕನ್ನಡದಲ್ಲಿ ಅಪಭ್ರಂಶವಾಗಿ ಬಸವ ಎಂದು ಉಚ್ಚರಿಸಲ್ಪಡುವುದು. ಬಸವ ಎಂದರೆ ಎತ್ತು. ಗೂಳಿಯು ಗ್ರಾಮ ಜೀವಿ, ವೃಷಭ ರಾಶಿಯವರ ಜೀವನವು ಇದರಿಂದ ಗ್ರಾಮ ಮೂಲಕವಾಗಿಯೇ ನಡೆಯುತ್ತಿರುವುದು.

ವೃಷಭರಾಶಿಯ ಪತಿ ಶುಕ್ರ. ವೃಷಭ ರಾಶಿಯ ದರ್ಶನ ಕಾಲದಲ್ಲಿ ಮಾನವನು ಪ್ರಗತಿಯ ಮೆಟ್ಟಿಲನ್ನು ಏರಲಾರಂಭಿಸಿದನು. ಮನೆಯನ್ನು ಕಟ್ಟಿ ಬಾಳಲಾರಂಭಿಸಿದ ಮಾನವನು ಈ ಕಾಲದಲ್ಲಿ ಬೇಸಾಯದ ವೃತ್ತಿಯನ್ನು ತೊಡಗಿದನು. ಬೇಸಾಯದ ಮೂಲಕ ಶಾಂತಿಯ ಜೀವನವನ್ನು ಕಳೆಯುವುದೇ ಆತನ ಧ್ಯೇಯವಾಯಿತು. ಬೇಸಾಯಕ್ಕಾಗಿ ವಸ್ತೂಪಕರಣಗಳನ್ನು ಹುಡುಕುತ್ತಾ, ಲೋಹವನ್ನು ಹೊಂದಿ, ನೇಗಿಲಿನ ಸಂಪರ್ಕವನ್ನು ಹೊಂದಿದನು. ಕೃಷಿ ವ್ಯವಹಾರದ ಜೀವನವನ್ನು ಮಾನವನು ಆರಂಭಿಸಿದ ಕಾಲದಲ್ಲಿ ಅನ್ಯೋನ್ಯ ಜಗಳಗಳು ಕಡಮೆಯಾಗಿದ್ದವು. ಇಂತೆಯೇ ಈ ರಾಶಿಯ ಮನುಷ್ಯನು ತಾನು ತನ್ನ ವ್ಯವಹಾರ ಜೀವನವನ್ನು ಆರಂಭಿಸುವ ವೇಳೆ ಜಗಳಗಳಿರುವುದಿಲ್ಲ. ಮುಂದಕ್ಕೆ ಜಗಳಗಳು ಸಂಪತ್ತಿನ ಮೂಲಕ ಉದ್ಭವಿಸುತ್ತವೆ. ವೃಷಭ ರಾಶಿಯವನ ಕಣ್ಣು ಸಂಪತ್ತಿನ ಕಡೆಗೆ ಹರಿಯತೊಡಗಿದಾಗ ಜಗಳವೇಳುತ್ತದೆ. ಈ ರಾಶಿಯ ಮನುಷ್ಯನು ಮೊತ್ತ ಮೊದಲು ತನ್ನ ಉದ್ಯೋಗಕ್ಕೆ ಬೇಕಾದ ವಸ್ತು ಸಂಗ್ರಹಗಳ ಕೊರತೆಗೆ ಹೊರಟು ಅವನ್ನು ಪಡೆಯುತ್ತಿರುವನು. ಪಡೆದ ಬಳಿಕ ಅವನು ಜಗಳದಲ್ಲಿ ಬೀಳುವನು.

ಮಳೆಗಾಲದಲ್ಲಿ ಬೇಸಾಯ ನಡೆಯುತ್ತಿರುವುದು. ಆ ಸಮಯ ಮಾನವನು ಆನಂದದಿಂದ ತನ್ನ ಸ್ತ್ರೀಯೊಂದಿಗೆ ಇದ್ದು, ಸುಖ ಸಂತೋಷದಿಂದ ಜೀವನವನ್ನು ಕಳೆಯುತ್ತಿರುವನು. ಮಾನವ ಪ್ರಾಣಿಯ ಜೀವನ ಈ ರೀತಿ

ಯಿಂದ ಆರಂಭಗೊಂಡು ಮುಂದೆ ಕ್ರಮೇಣ ಅಹಂಭಾವ ಉಂಟಾಯಿತು. ಈ ಅಹಂಭಾವವು ಈ ಮನೆ ನನ್ನದು, ಈ ಗದ್ದೆ ನನ್ನದು, ಎಂಬ ವಿಚಾರವನ್ನು ಹೃದಯದಲ್ಲಿ ಹುಟ್ಟಿಸಿತು. ಈ ರೀತಿಯ ಕಟ್ಟುಪಾಡೇ ವೃಷಭರಾಶಿಯವರ ಜೀವದಲ್ಲಿ ಉಂಟಾಗುತ್ತಿರುವುದು. ಅಹಂಭಾವದ ಮೂಲಕ ಕುಟುಂಬ ಬಂಧುವರ್ಗಗಳಲ್ಲಿ ಭಿನ್ನತೆಗೆ ಅವಕಾಶವಾಗುವುದು.

ವೃಷಭರಾಶಿಯು ದರ್ಶನಕಾಲ ವಿವಾಹದ ನಿಯಮವಿರಲಿಲ್ಲ. ಇದರ ದರ್ಶನವಾಗುತ್ತಲೇ ವಿವಾಹಪದ್ಧತಿಯಾಯಿತು. ಈ ರಾಶಿಯ ಮನುಷ್ಯನು ಉದ್ಯೋಗಕ್ಕೆ ಇಳಿಯುತ್ತಲೇ ವಿವಾಹ ಸಂಪರ್ಕವನ್ನು ಹೊಂದುತ್ತಿರುವನು. ಮೇಷರಾಶಿಯು ಪ್ರಕೃತಿ ಕಾಲದಲ್ಲಿ ಮೆಚ್ಚಿದ ಸ್ತ್ರೀಯೊಡನೆ ವಿವಾಹವಾಗುತಿತ್ತು ಈ ರಾಶಿಯು ಕಾಲ ಅಂತಲ್ಲ. ಮೇಷರಾಶಿಯಲ್ಲಿ ಕಾಮ ಕ್ರೋಧಗಳ ಹುಟ್ಟು ಆದಂತೆಯೇ ಈ ರಾಶಿಯಲ್ಲಿ ಸ್ವಾರ್ಥ ಮತ್ತು ಲೋಭಗಳು ಜನಿಸಿದುವು. ಸ್ವಾರ್ಥ-ಲೋಭಗಳ ಹುಟ್ಟು ಇದರಿಂದ ಈ ರಾಶಿಯವರಲ್ಲಿ ಅಧಿಕವಾಗುತ್ತದೆ. ಸ್ವಾರ್ಥಲೋಭಗಳು ಸುಖ ಶಾಂತಿಯ ಪೂರಕಗಳಾಗಿದ್ದು ಈ ರಾಶಿಯವನು ಶಾಂತಿಪ್ರಿಯನೆಂದು ಕಾಣುವನು. ಈ ಕಾರಣದಿಂದಲೇ ವೃಷಭ ರಾಶಿಯನ್ನು ಸುಖಾಭಿಲಾಷೆಯ ಶಾಂತಿಯ ರಾಶಿಯೆಂದು ತಿಳಿಯುವರು.

ಮೇಷ ರಾಶಿಯವನು ಧ್ಯೇಯವಾದಿಯು. ವೃಷಭರಾಶಿಯವನು ವ್ಯಾವಹಾರಿಕ ಜೀವಿಯು. ಮೇಷ ರಾಶಿಯವನು ವ್ಯಾವಹಾರಿಕ ಜೀವನದ ಕಲ್ಪನೆಯನ್ನು ಮನ್ನಿಸುವನು. ಕೂಡಲೇ ಅದಕ್ಕೆ ಸಮ್ಮತಿಸುವನು. ವೃಷಭರಾಶಿಯವನ ಜೀವನ ಇದರ ವಿರುದ್ಧವಾಗಿಯೇ ಕಂಡುಬರುವುದು. ಯಾವುದನ್ನೂ ಪ್ರತ್ಯಕ್ಷ ಕಂಡೇ ವಿಶ್ವಾಸಗೊಳ್ಳುವ ಸ್ವಭಾವ ವೃಷಭ ರಾಶಿಯವನದ್ದು. ಆದ್ದರಿಂದ ವೃಷಭರಾಶಿಯವನಿಗೆ ಅನ್ಯರ ಮೇಲೆ ವಿಶ್ವಾಸ ಕಡಮೆ. ಯಾವ ಕೆಲಸದಲ್ಲೂ ವೃಷಭರಾಶಿಯವರು ಅನ್ಯರನ್ನು ಮುಂದೂಡಿ ತಾವು ಅದನ್ನು ನೋಡುತ್ತಿರುವರು. ಅನ್ಯರನ್ನು ಮುಂದಕ್ಕೆ ದೂಡಿ ತಾವು ಹಿಂದಿದ್ದು ಅದರಿಂದಾಗುವ ಪರಿಣಾಮವನ್ನು ಕಾಣುತ್ತಿರುವರು. ಬೇರೆಯವರನ್ನು ಮುಂದೆ ದೂಡುವಾಗ ತಾವು ಅವರ ಹಿಂದೇ ಇರುವೆವೆಂಬುದನ್ನು ತೋರದಂತೆ ಮಾಡಲು ಹವಣಿಸುತ್ತಿರುವರಾದರೂ ಜನತೆಗೆ ಅದು ತಿಳಿಯುತ್ತದೆ. ಸಮಾಜ ಯಾ ಕುಟುಂಬದ

ಮೇಲೆ ಇದರಿಂದ ಈ ರಾಶಿಯವರ ಪರಿಣಾಮವಾಗುತ್ತಿದೆ. ಈ ರಾಶಿಯವರು ಸಮಾಜ ಮತ್ತು ಕುಟುಂಬದಲ್ಲಿ ಸ್ವಾರ್ಥ ಮತ್ತು ಲೋಭಗಳ ಮೂಲಕ ಅದರ ಪರಿಣಾಮವನ್ನು ಬೀರುತ್ತಿರುವರು.

ಮಿಥುನರಾಶಿಯ ಆರಂಭವರೆಗೆ ಮಾತೃಸತ್ತೆಯ ಪದ್ಧತಿಯು ಇದ್ದಿತು. ಜನನಕಾಲದಲ್ಲಿ ಒಡಹುಟ್ಟಿದವರು ಅನೇಕರಿದ್ದು, ವೃಷಭರಾಶಿಯವರ ಜನನವಾದ ನಂತರ ಮುಂದಿನ ಮಗು ಜನನಕ್ಕೆ ಬರುವ ವೇಳೆ ತಾಯಿಯ ಸುಖಾರೋಗ್ಯಗಳು ಇದರಿಂದ ಕೆಡುತ್ತಿರುವವು. ವೃಷಭ ರಾಶಿಯ ಕಾಲ ಪುರುಷನು ಸ್ತ್ರೀಯ ಅಂಕೆಯಲ್ಲಿದ್ದನು, ವೃಷಭ ರಾಶಿಯವನೂ ಸ್ತ್ರೀಯ ಅಂಕೆಯಲ್ಲಿರುವನು. ಪ್ರಾಚೀನರು ವೃಷಭರಾಶಿಯ ವಿಷಯದಲ್ಲಿ ಬಹುವಾಗಿ ವರ್ಣಿಸಿರುವರು.

ವೃಷಭ ಸ್ಥಿರರಾಶಿ, ಶೀತ ಪ್ರಕೃತಿ, ರೂಕ್ಷ, ಉದಾಸೀನ ಸ್ವಭಾವ, ಶ್ವೇತ ವರ್ಣ, ಲಿಂಬೆಯ ಬಣ್ಣವೆಂದು ಪಾಶ್ಚಾತ್ಯರ ಮತ. ಈ ರಾಶಿ ಅಭಾವಾತ್ಮಕ ರಾಶಿ, ಭೂಮಿರಾಶಿ, ಜಲಾಶ್ರಯ, ರಜೋಗುಣಯುಕ್ತವಾದುದು. ಮಧ್ಯ ರಾತ್ರಿ ಕಾಲ ಕುರುಡುತನದಿಂದ ಕೂಡಿರುವುದು. ಬಹುಪ್ರಸವ, ಸಮರಾಶಿ, ಹ್ರಸ್ವದೇಹಿ, ಸ್ತ್ರೀರಾಶಿ, ಸ್ತ್ರೀತತ್ವ, ದಕ್ಷಿಣ ದಿಕ್ಕು ಪಶುರಾಶಿ, ಉಳಕೊಳ್ಳುವ ವಾಸಸ್ಥಾನ ಗೋಶಾಲೆ ಮತ್ತು ಕಾಡು ಈ ರಾಶಿಯ ಪ್ರಧಾನ ತತ್ವ-ಶಾಂತಿ, ಮೂಲ ಸ್ವಭಾವ ಸ್ಥಿತಿಸ್ಥಾಪಕತ್ವ, ನೀಲರತ್ನ, ತಾಮ್ರಧಾತು, ಶಾರೀರಿಕ ದೃಶ್ಯಜತತ್ವ, ಮಾನಸಿಕ ದೃಶ್ಯ ಸ್ಥಿರತೆ, ರಾಶಿಯ ಪ್ರಧಾನಧರ್ಮ ನಿರ್ಮಾಣ ಮಾಡುವುದು. ಮತ್ತು ವ್ಯವಸ್ಥೆ ಮಾಡುವುದು. ಈ ರಾಶಿಯವರ ಪ್ರಧಾನ ಕಣ್ಣು, ಕಂಠ, ಮಾತುಗಳಲ್ಲಿ ಕಂಡುಬರುವುದು. ಈ ರಾಶಿಯವರ ಗುಣಧರ್ಮ ಸ್ವಾರ್ಥಲಾಭಗಳ ತೃಷ್ಣೆಯಿಂದ ಕೂಡಿದ್ದು ಅದು ಬಹಿರಂಗವಾಗುವುದು.

ವೃಷಭ ರಾಶಿಯವರು ವಿಲಾಸಪ್ರಿಯರು ಸುಖಾಭಿಲಾಷಿಗಳೂ ಆಗಿದ್ದು ದೇಹಶ್ರಮವನ್ನು ಬಯಸುವುದಿಲ್ಲ. ದೇಹಕ್ಕೆ ದಣುವನ್ನುಂಟುಮಾಡಿ ಕೊಳ್ಳಲು ಹಿಂಜರಿಯುತ್ತಾರೆ. ಕುಟುಂಬದಲ್ಲಿ ಯಾರೇ ಕಷ್ಟಗೊಳ್ಳಲಿ, ದೇಹಪರಿಶ್ರಮಗೊಳ್ಳಲಿರುವ ಸಂದರ್ಭ ಬಂದಲ್ಲಿ ಏನಾದರೂ ನೆವಹಾಕಿ ಅದರಿಂದ ತಪ್ಪಿಸಿ ಕೊಳ್ಳುವರು. ವೃಷಭ ರಾಶಿಯ ಸ್ತ್ರೀ ಪುರುಷರ ಸ್ವಭಾವವೇ ಇಂತಹುದು. ಹೆಂಗುಸರು ಗೃಹವಾರ್ತೆಯ ಶ್ರಮ ಕೆಲಸವನ್ನು ಕೈಕೊಳ್ಳ

ನ್ರವಿಲ್ಲ ಅಂತಹ ಘಟನೆ ಬಂದಲ್ಲಿ ಯಾವುದಾದರೂ ಉಪಾಯ ಹಿಡಿದು ದೂರವಾಗಿರುತ್ತಾರೆ. ಆದ್ದರಿಂದ ಈ ರಾಶಿಯವರು ಯೋಗಿಗಳೆನಿಸುವುದಿಲ್ಲ.

ಯೋಗಿಗಳು ದೇಹ ಪರಿಶ್ರಮವನ್ನು ಹೊಂದುವರು. ಯೋಗಭ್ಯಾಸಕ್ಕೆ ದೇಹಶ್ರಮ ಮುಖ್ಯ. ವಿದ್ಯಾಭ್ಯಾಸ ವಿಚಾರದಲ್ಲೂ ವೃಷಭರಾಶಿಯವರು ವಿಲಾಸ ಸುಖ ಪ್ರಿಯರಾದುದರಿಂದ ಉತ್ತಮ ದರ್ಜೆಯನ್ನು ಹೊಂದಲಾಗು ವುದಿಲ್ಲ. ಮನಸ್ಸಿನಲ್ಲಿ ಉತ್ತಮ ಸ್ಥಾನ ಮಾನ ಮತ್ತು ಉಚ್ಚ ಶಿಕ್ಷಣದ ಅಭಿ ಲಾಷೆ ಇರುವುದಾದರೂ ಆ ವಿಷಯದಲ್ಲಿ ಶ್ರಮವನ್ನು ವಹಿಸದೆ ವಿದ್ಯಾಭ್ಯಾಸವು ಮನಸ್ಸಿನ ವಿಚಾರದಂತಾಗದು. ಪಂಚಿಕೆಯನ್ನು ಮಾಡುತ್ತಿರುವುದರಿಂದ ರಾಜನೀತಿಯ ಕಡೆಗೆ ಹೋಗುವುದೊಳ್ಳಿತು. ಕೆಲವರು ಉತ್ತಮ ರಾಜ ನೀತಿಜ್ಞರಾಗುತ್ತಾರೆ. ನಾಗರಿಕ, ಸಭಾಧ್ಯಕ್ಷ, ಸ್ಥಾನಾದಿಗಳನ್ನು ಹೊಂದು ತ್ತಾರೆ. ಪ್ರಾಪಂಚಿಕ ಸಮಸ್ಯೆಗಳಲ್ಲಿ ಸಿಲುಕಿದಾಗ ಅವುಗಳಿಂದ ಓಡಿಹೋಗು ವರು. ಮನೆಯನ್ನೂ ಬಿಟ್ಟುಹೋಗುವ ಸಂದರ್ಭವಿದೆ. ಎತ್ತಿನ ಸ್ವಭಾವ ಇದು. ಸನ್ಯಾಸಿಗಳಾಗುವುದಿಲ್ಲ. ತಾಪತ್ರಯಗಳಲ್ಲಿ ಸಿಲುಕಿದಾಗ ಆತ್ಮಹತ್ಯೆ ಯನ್ನೂ ಮಾಡಿಕೊಳ್ಳಲು ಹೇಸುವುದಿಲ್ಲ. ತಾವೇ ತಮಗೆ ಕಷ್ಟವನ್ನು ತಂದು ಕೊಳ್ಳುವರು. ಪರವಸ್ತುಗಳ ಮೇಲೆ ಕೈಹಾಕುವ ಅಭ್ಯಾಸ ಈ ರಾಶಿಯವರಿಗೆ ಬಂದುಬಿಡುವುದು. ಕಳ್ಳತನ ಮೋಸಗಾರಿಕೆಗಳನ್ನು ಮಾಡುವವರೂ, ತಮ್ಮ ವಿಲಾಸ ಸುಖಗಳಿಗಾಗಿ ಮಾಡುವವರಿರುವರು. ಧಾರ್ಮಿಕ ಬುದ್ಧಿ ಇರುವುದು. ಭಕ್ತಿಯು ಕಂಡುಬರುತ್ತದೆ. ನಿಯಮ ಅಷ್ಟಾಂಗ ಸಾಧನೆಯ ಅಂಗವಿದ್ದು ಈ ಕಡೆ ಗಮನವಿರುವುದು. ಭಕ್ತರ ಜನನ ಈ ರಾಶಿಯಲ್ಲಿ ಕಂಡು ಬರುವುದಿದೆ ಈ ರಾಶಿಯವರಿಗೆ ಸಂಸಾರಿಕ ಆಸಕ್ತಿ ಅಧಿಕ. ಸಂಸಾರಿಕ ಆಸಕ್ತರಾಗಿ ಸ್ವಾರ್ಥ ಅಹಂಭಾವಗಳ ಬೀಡಾಗಿ ಬಾಳುವುದು ಈ ರಾಶಿಯವರ ಮುಖ್ಯಧರ್ಮ. ಈರಾಶಿ ಮೇಷ ರಾಶಿಯ ಪತ್ನೀರಾಶಿಯೆಂದು ಹೇಳುತ್ತಾರೆ. ಗಂಡು ಯಾವಾಗಲೂ ದುಡಿಯುತ್ತಿರುವವ. ಹೆಣ್ಣು ಅದರ ಸುಖಭೋಗವನ್ನು ಹೊಂದುತ್ತಿರುವ ವಳು. ವಿಲಾಸ ಸುಖಪ್ರೀತಿ ಹೆಣ್ಣಿನಲ್ಲಿ ಅಧಿಕ. ಗಂಡುಸಿಗೆ ತ್ಯಾಗ ಸಾಹಸ ಉದಾರ ತನದ ಗುಣಗಳಿರುತ್ತವೆ. ಸಂಸಾರದ ಸಮಸ್ಯೆಗಳೊಂದಿಗೆ ಹೋರಾಟವನ್ನು ನಡೆಸುತ್ತಿರುವುದು ಗಂಡುಸಿನ ಗುಣ. ಹೆಂಗುಸು ಪುರುಷನ ಹೋರಾಟದ

ಫಲಸಂಪತ್ತಿಗೆ ಭಾಗಗೊಳುತ್ತಿದ್ದ ವಿಲಾಸ ಸುಖಪ್ರಿಯರಾಗುವಳು. ಆದ್ದರಿಂದ ಅನ್ನರ ಸುಖ ಸಂಪತ್ತಿನ ಫಲ ಭೋಗದ ಬಾಳು ವೃಷಭ ರಾಶಿಯವರಿಗೆ ಕಂಡುಬರುವುದು.

## ಮಿಥುನ

ಮಿಥುನ ರಾಶಿ ಚಕ್ರದ ಮೂರನೇರಾಶಿ. ಕಾಲಪುರುಷನ ಬಾಹುಸ್ಥಾನ ಈ ರಾಶಿಗೆ. ಈ ರಾಶಿಯ ಒಡೆಯ ಬುಧ. ಬುಧ ವಿದ್ಯಾವಿನಾತುಲಕಾರಕ ಗ್ರಹ. ಗದೆಯನ್ನು ಹಿಡಿದ ಗಂಡು; ವೀಣೆಯನ್ನು ಹಿಡಿದ ಹೆಣ್ಣು ಜೊತೆಯಾಗಿರುವುದು. ಈ ರಾಶಿ ಸ್ವರೂಪ. ಮಿಥುನ ರಾಶಿಯು ದ್ವಿ-ಸ್ವಭಾವರಾಶಿ. ಆದ್ದರಿಂದ ಇದಕ್ಕೆ ದ್ವಿಸ್ವಭಾವವನ್ನು ಹೇಳುತ್ತಿರುವರು. ಮೇಷರಾಶಿ ತಂದೆಯೆಂದೂ, ವೃಷಭರಾಶಿಯು ತಾಯಿಯೆಂದೂ ಹೇಳುತ್ತಿರುವರು. ಈ ಎರಡು ರಾಶಿಗಳ ಗುಣ ಧರ್ಮ ಮಿಥುನ ರಾಶಿಗೆ ಇರುವುದೆಂದೂ ಹೇಳುತ್ತಿರುವರು. ರಾಶಿ ಸ್ವರೂಪವನ್ನೂ ಗಂಡು ಹೆಣ್ಣುಗಳಿಂದ ಕೂಡಿಯೇ ಇದರಿಂದ ಕೊಡಲಾಗಿದೆ.

ಮೇಷ ವೃಷಭ ರಾಶಿಗಳು ಒಂದಾದಾಗ ಅನ್ಯೋನ್ಯ ಸಾತುಕತೆಗಳು ನಡೆದುವು. ಅದರಿಂದ ಸಾತನ ಆರಂಭವಾಯಿತು. ಮಿಥುನದ ಅಧಿಪತಿ ಬುಧ. ಬುಧನು ಈ ಕಾರಣದಿಂದಲೇ ಸಾತನ ಕಾರಕನಾದ ಗ್ರಹನು. ವೃಷಭ ರಾಶಿಯ ಕೊನೆಯವರೆಗೆ, ಹೆಂಗುಸರ ಸ್ಥಿತಿ ಅತ್ಯಂತ ದಯನೀಯಾವಸ್ಥೆಯಲ್ಲಿತ್ತು. ಸ್ತ್ರೀಯರಿಗೆ ಸಂರಕ್ಷಕರು ಯಾರೂ ಇದ್ದಿಲ್ಲ. ಯಾವ ವ್ಯವಸ್ಥೆಯೂ ಸ್ತ್ರೀಯರಿಗಿದ್ದಿಲ್ಲ. ಈ ಕಾಲದಲ್ಲಿ ಒಬ್ಬಳನ್ನು ನಾಲ್ಕಾರು ಗಂಡುಸರು ಭೋಗಗೊಳ್ಳುತ್ತಿದ್ದರು. ಇದರಿಂದ ಹೆಂಗುಸಿಗೆ ಕಷ್ಟವೇ ಉಂಟಾಗುತ್ತಿದ್ದಿತು. ಈ ಕಾರಣದಿಂದಲೇ ಸ್ತ್ರೀಗೆ ಏಕಪತೀ ವ್ರತದ ಆರಂಭವಾಯಿತು. ಗಂಡುಸು ಹೀಗಿದ್ದರೂ ಬೇರೆ ಬೇರೆ ಹೆಂಗುಸರ ಸಂಪರ್ಕಗೊಳ್ಳುತಿದ್ದನು. ಹೆಂಗುಸು ಒಂದೇ ಸಮಯದಲ್ಲಿ ಎರಡು ಗಂಡುಸಿನ ಭೋಗವನ್ನು ಹೊಂದಲಾಗುವುದಿಲ್ಲ. ಈ ಶಕ್ತಿ ಆಕೆಗಿರುವುದಿಲ್ಲ; ಗಂಡುಸು ಎರಡು ಹೆಂಗುಸಿನ ಭೋಗವನ್ನು ಒಂದೇ ಸಮಯದಲ್ಲಿ ಹೊಂದಲು ಸಾಧ್ಯವಿದೆ. ಈ ವಿಚಾರವನ್ನು ಎತ್ತು, ದನ ಮೊದಲಾದವುಗಳಲ್ಲಿ ಕಂಡು ತಿಳಿಯಲು ಸಾಧ್ಯವಿದೆ.

ಮಿಥುನರಾಶಿಯು ಹುಟ್ಟಿನ ಮೊದಲು ಬಹುಪತ್ನಿತ್ವ ಯುಗವು ಸ್ತ್ರೀಗಾಗಿದ್ದಿತು. ಈ ಪದ್ಧತಿಯು ಸ್ತ್ರೀ ಸಮಾಜಕ್ಕೆ ಕಷ್ಟವನುಂಟುಮಾಡುತ್ತಿದ್ದಿತು. ಈ ಕಾರಣದಿಂದ ವಿವಾಹ ಬಂಧನದ ಕಲೆ ಮಿಥುನರಾಶಿಗೆ ಬಂದಿತ್ತು. ಪಿತೃ ಪದ್ಧತಿ ಈ ಕಾಲದಿಂದ ಕಂಡುಬಂದಿತು; ಮಾತಿನ ಹುಟ್ಟು ಆದೊಡನೆಯೇ ಭಾಷಾಶಾಸ್ತ್ರದ ಅನುಸಂಧಾನವಾಯಿತು. ಕೈಗಾರಿಕೆ ಕಲೆಗಳ ಕಡೆಗೆ ಗಮನವಾಯಿತು. ಕೈಗಾರಿಕೆಯು ಕಲಾ ಸಂಶೋಧನೆ ಈ ರಾಶಿಯುವರಿಗೆ ಇದರಿಂದ ಕಾಣುವುದು.

ಮಿಥುನ ರಾಶಿಯುವರಲ್ಲಿ ಹಲವರು ಈ ಕಾರಣದಿಂದ ಪುರೋಹಿತ ವೃತ್ತಿಯುವರು ಕಾಣುವರು. ಇನ್ನು ಹಲವರು ಕಥಾ ಪ್ರವಚನಕಾರರೂ, ವಾಗ್ಮಿಗಳೂ, ಕಂಡುಬರುವರು. ಮುದ್ರಣ ಕಲೆಯುವರನ್ನೂ ಕಾಣುವೆವು. ಸಿನಿಮಾ ಮೊದಲಾದ ಕಲಾಜೀವಿಗಳನ್ನೂ ಈ ರಾಶಿಯುವರಲ್ಲಿ ಕಾಣುವೆವು. ಚಲಚ್ಚಿತ್ರದ ಸಂಸ್ಥೆ, ಮುದ್ರಣಾಲಯ, ಚಿತ್ರ, ಸಂಗೀತಕಲೆ, ವ್ಯಾಯಾಮ ಸಾಧನೆ, ಮೊದಲಾದುವುಗಳಲ್ಲಿ ಆಸಕ್ತಿಯುಳ್ಳವರೂ ಕಾಣುವರು. ಈ ಕಲಾಯುಗದಲ್ಲಿ, ಸಂಗೀತ, ಆಯುರ್ವೇದ, ಜ್ಯೋತಿಷ ಮೊದಲಾದುವುಗಳ ಹುಟ್ಟು ಆಯಿತು. ಬಟ್ಟೆಬರೆಯ ಮಗ್ಗದ ಕೆಲಸ, ಮರಗಳ ಕೆಲಸ ಮೊದಲಾದುವೂ ಈ ಕಾಲವಲ್ಲೇ ಕಂಡುಬಂದುವು. ಮಿಥುನ ರಾಶಿಯುವರಲ್ಲಿ ಈ ಎಲ್ಲಾ ವಿಷಯುಗಳ ಪ್ರಭಾವ ಬೇರೆ ಬೇರೆಯುವರಿಗೆ. ಈ ಕಾರಣದಿಂದಲೇ ತೋರಿ ಬರುವುದು. ಸಂಸಾರಿಕ ಜೀವನದ ಹುಟ್ಟು ಈ ಹೊತ್ತಿನಲ್ಲಿ ಕಂಡುಬಂದು ಹೆಂಗುಸಿಗೆ ಗೃಹಭರಣದ ಹೊಣೆಗಾರಿಕೆಯುಂಟಾಯಿತು. ಈ ಹೊಣೆಗಾರಿಕೆ ಬಂದೊಡನೆ ದಾಂಪತ್ಯ ಜೀವನದಲ್ಲಿ ಜಗಳಕ್ಕೆ ಆರಂಭವಾಯಿತು. ದಾಂಪತ್ಯ ಜೀವನದಲ್ಲಿ ಜಗಳಾಟ ಈ ರಾಶಿಯುವರಿಗೆ ತೋರಲು ಇವರಿಂದ ಸಾಧ್ಯವಿದೆ; ಸಂಸಾರಿಕ ಜೀವನದಲ್ಲಿ ಜಗಳಾಟವು ಹುಟ್ಟುತ್ತಲೇ ಮನುಷ್ಯನು ವಿರಕ್ತನಾಗುವನು. ಅವನು ಆಗ ಶಾಂತಿಯನ್ನು ಹುಡುಕ ಹೊರಡುವನು ಕಾಮಶಾಸ್ತ್ರ ವೇದಾಂತಶಾಸ್ತ್ರಗಳಲ್ಲಿ ಹೇಳಲಾದ ವಿಭಿನ್ನವಾದ ಎಂಭತ್ತನಾಲ್ಕು ಆಸನ ವಿಷಯುಗಳ ಪರಿಚಯು ಸಂಸಾರಿಕ ಜಗಳದಿಂದ ಇವರಲ್ಲಿ ಹುಟ್ಟಿತು. ಶೃಂಗಾರ ಶಾಸ್ತ್ರ ಯೋಗ ಶಾಸ್ತ್ರಗಳ ಅನುಸಂಧಾನ

ಈ ರಾಶಿಯವರಲ್ಲಿದೆ. ಈ ರಾಶಿಯ ಪ್ರಭಾವ ಕಿವಿ ಮತ್ತು ಕುತ್ತಿಗೆಗಳ ಮೇಲಿರುತ್ತದೆ. ಈ ರಾಶಿಯಲ್ಲಿರುವ ಪಾಪಗ್ರಹರು, ಈ ಸ್ಥಾನಗಳ ಮೇಲೆ ದೋಷವನ್ನುಂಟುಮಾಡುತ್ತಿರುವರು.

ಮಿಥುನ ರಾಶಿಯು ದ್ವಿಸ್ವಭಾವ ರಾಶಿಯೆಂದೂ ಪ್ರಾಚೀನರು ಹೇಳಿರುವರು. ವಾಯುತತ್ವ, ಮಧ್ಯಾಹ್ನ ಕಾಲ ಅಂಧಸ್ಥಿತಿ ಇದ್ದು ಈ ಹೊತ್ತಿನಲ್ಲಿ ಅನಿಷ್ಟ ಘಟನೆಗಳಾಗುತ್ತವೆ. ಜಲಾಶ್ರಯಿ, ಸತ್ವಗುಣ, ಅಲ್ಪಪ್ರಸವ ರಾಶಿ, ದ್ವಿಪದ ರಾಶಿಯಾಗಿದ್ದು ಮಧ್ಯ ದೇಹ, ಉಷ್ಣಪ್ರಧಾನ, ಆರ್ದ್ರ ಸ್ವಭಾವ, ದಿನರಾಶಿ, ಭಾವಾತ್ಮಕ ರಾಶಿ, ಪುರುಷ ತತ್ವ. ಪಶ್ಚಿಮ ದಿಕ್ಕು, ವಕ್ಷಸ್ಥಾನ, ಮನುಷ್ಯನ ರಾಶಿ.

ಮುದ್ರಣಾಲಯ, ಯಾಂತ್ರಿಕ ಸಂಸ್ಥೆ ಪತ್ರಿಕಾ ಕಾರ್ಯಾಲಯ, ಚಲಚ್ಚಿತ್ರ ಸಂಸ್ಥೆ, ಅಂಚೆ ಇಲಾಖೆ, ಟೆಲಿಗ್ರಾಫಿ ಅಧಿಕಾರ, ಶಾಲೆ, ವೇಧಶಾಲೆ, ಸಂಶೋಧನಾ ಶಾಖೆಯೇ ಮೊದಲಾದುವು ಈ ರಾಶಿಯವರಿರುವ ಸ್ಥಾನ. ಸಂತೋಷದಿಂದ ಕೂಡಿರುವುದೂ ವೈಚಿತ್ರ್ಯ ರುಚಿಯೂ ಪ್ರಧಾನ ತತ್ವವಾಗಿರುವುದು. ಹಸುರು ಮತ್ತು ಹಳದಿ ವರ್ಣ. ಪಾದರಸ ಧಾತು. ಶಾರೀರಿಕ ವೃಕ್ಷ ಸಂಕುಚನ ಪ್ರಸಾರಣಾತ್ಮಕವಾದುದು. ಕೆಲವೊಮ್ಮೆ ಉಲ್ಲಾಸಿಗಳೂ ಕೆಲವೊಮ್ಮೆ ದುಃಖಿತರೂ ಆಗಿರುವರು. ಕಲೆ ಮತ್ತು ಅನ್ವೇಷಣ ಸ್ವಭಾವ ರಾಶಿಯ ಮೂಲ ಸ್ವಭಾವ. ಈ ರಾಶಿಯ ಅಧಿಕಾರ **ಕೈಗಳಲ್ಲಿ.**

ಈ ರಾಶಿಯ ಮನುಷ್ಯರು ವಿಲಾಸದ ಕಡೆಗೆ ಕಣ್ಣಿಳ್ಳವರಾಗಿರುತ್ತಾರೆ. ಹೃದಯ ವಿಶ್ವಾಸಾರ್ಹವಾದುದಲ್ಲ. ತನ್ನನ್ನು ಬಳೆಯಿಸಿದವರನ್ನೂ ಮರೆಯುವರು. ದೊಡ್ಡ ದೊಡ್ಡ ಶ್ರೀಮಂತರ ಹಿಂದೆ ಹೋಗುವ ಚಟದೊಂದಿಗೆ ಚಿತ್ರ, ಕಲೆ, ತೋಟಗಾರಿಕೆ (ಹೂದೋಟ) ಮೊದಲಾದುವುಗಳ ಸಂಪರ್ಕದವರನ್ನು ಹೊಂದಿರುತ್ತಾರೆ. ದ್ವಿಸ್ವಭಾವ ರಾಶಿಯಾದ್ದರಿಂದ ಒಂದೇ ಕಡೆ ಇದ್ದು ಬೆಳೆಯುವುದಿಲ್ಲ. ದಾಂಪತ್ಯ ಜೀವನದ ಕಾಲದಲ್ಲಿ ವಿಶೇಷ ಘಟನೆಗಳುಂಟಾಗುತ್ತವೆ. ಕರ್ಮಾಧಿಪತಿಯು ಬಲಿಷ್ಠನಾಗಿ ಲಗ್ನಾಧಿಪನ ಸಂಪರ್ಕಗೊಳ್ಳದಿದ್ದರೆ ವಿವಾಹವು, ಹಿರಿಯರಿದ್ದೂ ಅವರ ಸಂಪರ್ಕವಿರದೆ

ಸ್ವೇಚ್ಛಾವರ್ತನೆಯಿಂದ ನಡೆಯುವುದು. ಆದ್ದರಿಂದ ಕಾಮಶಕ್ತಿ ಪ್ರಬಲ ವಿದ್ದು ಗುರುಜನರನ್ನು ಆ ಕಾಲ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ವಿವಾಹಾನಂತರವೂ ದಾಂಪತ್ಯ ಜೀವನದಲ್ಲಿ ಕಾಲುಷ್ಯವಿರುತ್ತದೆ. ಕೆಲವರು ಬಡ ಕುಟುಂಬದಿಂದ ಮದುವೆಯಾಗುವುದು ಮಾತ್ರವಲ್ಲದೆ ಮದುವೆಯ ವಿಚಾರ ದಲ್ಲಿ ತಮ್ಮ ಇಚ್ಛೆಯನ್ನೇ ತೋರುತ್ತಿರುವರಲ್ಲದೆ ಈ ವಿಷಯದಲ್ಲಿ ಹಿರಿಯ ರನ್ನು ಗಮನಿಸುವುದಿಲ್ಲ. ಹೆಂಡತಿಯು ಹೆಚ್ಚು ಔಳಿವುಳ್ಳವಳಾಗಿರುವುದಿಲ್ಲ. ತಿಳಿವಿನ ವರ್ತನೆ ಕಡಮೆ. ಆಕೆ ಸ್ವಸುಖಾಭಿಲಾಷಿಯಾಗಿದ್ದು ಗಂಡನನ್ನು ಕಷ್ಟಕ್ಕೀಡುಮಾಡುವುದೂ ಕೆಲವೊಮ್ಮೆ ಇದೆ. ಗಂಡ ಹೆಂಡಿರಿಬ್ಬರೂ ಯೌವನ ಕಾಲದಲ್ಲಿ ಹಿರಿಯರನ್ನು ಲಕ್ಷಿಸುವವರಲ್ಲ. ಹಣದ ಕಡೆಗೆ, ಚಿನ್ನಾಭರಣಗಳ ಕಡೆಗೆ, ವಿಲಾಸದ ಆಸನ, ವೇಷಭೂಷೆಗಳ ಕಡೆಗೆ ಗಮನವಿರು ವುದು. ಧನಿಕರನ್ನು ಮಾತ್ರ ಲಕ್ಷಿಸುತ್ತಿರುವರು. ಸ್ವಾರ್ಥಸಾಧನೋದ್ದೇಶದಿಂದ ವಿದ್ವಾಂಸರನ್ನು ಗೌರವಿಸುವಂತೆ ನಟಿಸುವರು. ಉದಾರತನ ಸ್ವಹಿತ ಸಾಧನೋದ್ದೇಶಕ್ಕಾಗಿಯೇ ಇರುವುದು. ದನಕರುಗಳ ಲಾಲನೆ ಪಾಲನೆಗಳನ್ನು ಮಾಡುವವರು ಅದರ ವ್ಯಾಪಾರ ವೃತ್ತಿಯುಳ್ಳವರೂ ಇರುವರು.

ಕುಸ್ತಿಯೇ ಮೊದಲಾದ ಅಂಗಸಾಧನೆಯ ಪರಿಶ್ರಮವನ್ನು ಅಲ್ಪಕಾಲ ಮಾಡುವ ಚಟವಿರುತ್ತದೆ. ಸ್ಟಾಂಪು, ಚಿತ್ರ, ಕಲಾವಸ್ತು, ನಾಣ್ಯಗಳ ಕೂಡಿಡುವಿಕೆ, ವಸ್ತು ಪ್ರದರ್ಶನಾಭಿರುಚಿಗಳಿರುತ್ತವೆ. ಅವನ್ನು ವೃದ್ಧಿಗೊಳಿಸುವುದರಿಂದ ಪ್ರಗತಿಯಿದೆ. ಸಾಂಸಾರಿಕ ತಾಪತ್ರಯಗಳು ಸಂಭವಿಸುತ್ತವೆ. ಬಾಲ್ಯದಲ್ಲಿ ಅನಾರೋಗ್ಯ ಕಷ್ಟಪರಂಪರೆಗಳುಂಟಾಗುತ್ತವೆ.

ಮನಸ್ಸನ್ನು ದೃಢವಾಗಿರಿಸಲಿರುವ ಶಕ್ತಿ ಇರುವುದಾದರೂ ದೇಹದ ಮೃದುತೆಯ ಲಕ್ಷ್ಯವಿದ್ದು ಯೋಗಾಭ್ಯಾಸಿಗಳಾಗುವುದಿಲ್ಲ. ಯೋಗಾಭ್ಯಾಸ ವನ್ನು ಬಿಟ್ಟು ಅನ್ಯಶಾಸ್ತ್ರಗಳನ್ನು ಕಲಿಯುವ ತಾಳ್ಮೆ ಇರುತ್ತದೆ. ಯಾವುದೂ ಪೂರ್ಣವಾಗಿ ಇರುವುದಿಲ್ಲ ಪ್ರಾಪಂಚಿಕ ಜೀವನದಲ್ಲಿ ಬಹುವಿಧ ಕ್ಲೇಶಗಳನ್ನು ಹೊಂದುತ್ತಿದ್ದು ಪರಮಾರ್ಥದ ಕಡೆಗೆ ಲಕ್ಷಿಸುವುದಿಲ್ಲ. ತಮ್ಮ ತಪ್ಪು, ಕಷ್ಟ ಮೊದಲಾದುವುಗಳನ್ನು ಬೇರೆಯವರ ಮೇಲೆ ಹೊರಿಸಿಬಿಡು

ವರು. ವೈರಾಗ್ಯ ಜೀವನವನ್ನೂ ಹೊಂದದಿದ್ದ ಯೋಗಿಗಳಾಗುವುದಿಲ್ಲ. ಸಂಸ್ಥೆ ಮೊದಲಾದುವುಗಳಲ್ಲಿ ದುಡಿಯುತ್ತಿರುವರಾದರೂ ಧನಸಂಪತ್ತಿನ ವ್ಯವಹಾರದಲ್ಲಿ ನ್ಯಾಯಮಾರ್ಗವನ್ನು ಅನುಸರಿಸುತ್ತಿಲ್ಲ. ಕೆಲವರು ವೇದಾಂತ ಚರ್ಚೆ, ಪುರಾಣಶ್ರವಣ, ಸಂಕೀರ್ತನ, ಪಠನಾದಿಗಳನ್ನು ಮಾಡುವರು. ತನ್ನ ಗುರುಜನರನ್ನೂ ನಂಬಲಾರರು. ವಿಶ್ವಾಸಾರ್ಹವರ್ತನೆ ಇರುವುದಿಲ್ಲ. ಹಿರಿಯರನ್ನೂ ಧಿಕ್ಕರಿಸುವರು. ತಮ್ಮ ಮನಬಂದಂತೆ ನಡೆಯುವರು. ಈ ಕಾರಣದಿಂದಲೇ ಪರಮಾರ್ಥ ಮಾರ್ಗದಿಂದ ತಪ್ಪಿದವರಾಗುವರು.

ರಾಶಿಚಕ್ರದಲ್ಲಿ ಇದು, ಒಂದು ಕುಟುಂಬರಾಶಿ. ಆದ್ದರಿಂದ ಕುಟುಂಬದ ಒಡೆತನ ಇಲ್ಲವೇ ಅನೇಕ ಜನರು ಕೈಕೆಳಗಿರುವ ಸಂಸ್ಥೆಗಳ ಅಧಿಕಾರಿ ವೃತ್ತಿಯನ್ನು ಅವಲಂಬಿಸುವುದುಂಟು. ಈ ರಾಶಿ ಸಂರಕ್ಷಣಾರಾಶಿ. ಇಲ್ಲವೇ ಪಾಲನಾರಾಶಿ, ಮೇಷರಾಶಿಯು ಸಂರಕ್ಷಣಾ ರಾಯೆಯ ಪೋಲಿಸನಂತಿದ್ದು ಕಷ್ಟ ಪ್ರಾಪ್ತಿಯ ಸಂರಕ್ಷಣೆ ಮೇಷರಾಶಿಯಲ್ಲಿ. ಈ ರಾಶಿಯು ಸಂರಕ್ಷಣಾ ಭಾರ ಅಂತಹುದಲ್ಲ ಅನ್ನನಿರ್ವಿತವಾಗಿದ್ದ ಅಧಿಕಾರ ಸಂರಕ್ಷಣೆ ಇರುವುದು. ವೃಷಭ ರಾಶಿಯುನನು ಅನ್ನಪಾನಾದಿಗಳನ್ನಿತ್ತು, ಸಂರಕ್ಷಣೆಗೆ ಗಮನಿಸುವುದು ಮಿಥುನ ರಾಶಿ ವ್ಯಾವಹಾರಿಕ ಮತ್ತು ಪ್ರಾಪಂಚಿಕ ಜ್ಞಾನವನ್ನು ಕೊಡುವ ರಾಶಿಯಾಗಿದ್ದ ವ್ಯಾವಹಾರಿಕ ಸಂರಕ್ಷಣೆ ಇದಕ್ಕಿರುವುದು.

ಜೀವನ ರಂಗದಲ್ಲಿ ತೋರುತ್ತಿರುವ ನಾಟ್ಯವರ್ತನೆ ಇವರದು. ಹಿರಿದೇದು ತೋರುವಂತೆ ನಟಿಸುವರಾದರೂ ಭಿನ್ನ ಭಿನ್ನ ಪಾತ್ರುವನ್ನು ವಹಿಸಿ ರಂಗಭೂಮಿಯಲ್ಲಿ ನೆಲಸಿ ಕಾಣುತ್ತಿರುವ ನಟನ ಕೌಶಲ್ಯ ಮಿಥುನರಾಶಿಯವರಲ್ಲಿ ಕಾಣುವುದು. ಶಿಕ್ಷಣವು ಅಪೂರ್ಣ. ಅಪೂರ್ಣವಾಗಿದ್ದರೂ ಉತ್ತಮ ಜ್ಞಾನಸಂಪನ್ನನಂತೆ ನಟಿಸುತ್ತಿರುವುದು. ಇಂತಹ ಧರ್ಮ. ಜೀವನದ ಬೆಳವಣಿಗೆಯನ್ನು ಬಹುಮುಖವಾಗಿ ಕಾಣುವ ಸಂಭವ ಈ ರಾಶಿಯವರಲ್ಲಿದ್ದ ಸ್ಥಿರತೆಯ ಜೀವನಕ್ಕಿರುವ ಸ್ಥೈರ್ಯಶಕ್ತಿ ಕಡಿಮೆಯಾಗಿಯೇ ಕಂಡು ಬರುವುದು. ಮನದ ಹರಿವು ಸುಖಭೋಗಗಳಾಲಸೆಗಾಗಿರುತ್ತಿದ್ದ ಈ ಸಾಧನೆಯ ಉದ್ದೇಶದಿಂದ ಯಾವ ಯಾವ ಸಂಪರ್ಕವನ್ನು ಹೊಂದುವರೆಂದು ಅವರಿಂದಲೇ ನಿರ್ಣಯಿಸಲಾಗುವುದಿಲ್ಲ. ದೇವರ ಭಕ್ತಿ ಔಪಚಾರಿಕವಾಗಿ

ರುತ್ತದೆ. ದೇವರ ಬಲ ನೋಡಲಾದುವು. ಪ್ರಾಪಂಚಿಕ ಸುಖಭೋಗ ತೃಷ್ಣೆ ಯಿಂದಲೇ ನೆಲಸಿ ಕಾಣುವುದು. ಕಾಳಿದಾಸನು"ಕಾಪಿ ಇಸ್ವತಾಂ ಪಶ್ಯ" ಎಂದು ಹೇಳದಂತೆ ಈ ರಾಶಿಯವರು ಎಲ್ಲವನ್ನೂ ತಮ್ಮ ಭೋಗಕ್ಕಾಗಿಯೇ ಕಾಣುತ್ತಿರುವರು

**ಕರ್ಕಟಕ:-** ಕರ್ಕಟಕ ಕಾಲ ಪುರುಷನ ಹೃದಯರಾಶಿ. ಇದು ಗೋಲದ ದ್ವಿತೀಯ ಪಾದರಾಶಿ. ಶೇಷ ಗೋಲಪಾದದ ಆರಂಭ ರಾಶಿ. ನಾಲ್ಕನೆಯ ರಾಶಿಯಾಗಿದ್ದು ಈ ರಾಶಿಯಲ್ಲೂ ಜೀವನ ಸತ್ವಯ ಸವೀನತೆ ಕಂಡುಬರುವುದು. ಏಡಿ ಈ ರಾಶಿಯ ಸ್ವರೂಪ. ಚಂದ್ರನು ಈ ರಾಶಿಯ ಒಡೆಯ. ಗುರುವಿಗೆ ಈ ರಾಶಿ ಉಚ್ಚವಾಗಿರುವುದು. ಕುಜನಿಗೆ ನೀಚವಾಗುವುದು ಏಡಿಯ ಸ್ವಭಾವದ ಜೀವನವನ್ನು ಕಾಣುವೆವು. ಏಡಿ ಜಲಚರ ಪ್ರಾಣಿ. ಇದು ಸದಾ ನೀರನ್ನು ಕಲಕುತ್ತಲೇ ಇರುವುದು. ಹಾಗೆಯೇ ಈ ರಾಶಿಯವರು ತಾವು ಹೊಂದಿದಲ್ಲಿ ತಮ್ಮ ನಿತ್ಯ ಜೀವನದಲ್ಲಿ ಅಸ್ಥಿರ ಮನಸ್ಸನ್ನು ಶಾಂತಿಯಿಂದ ಇದ್ದುಕೊಳ್ಳಲು ಬಿಡರು.

ಈ ರಾಶಿಯು ರಾಶಿಚಕ್ರದ ನಾಲ್ಕನೇರಾಶಿ. ಇದು ಸೃಷ್ಟಿಯ ಮೇಲೆ ತನ್ನ ಅಧಿಕಾರವನ್ನು ತೋರುತ್ತಿರುವ ರಾಶಿ. ಆದ್ದರಿಂದಲೇ ಅಧಿಕಾರ ಧೋರಣೆಯ ವ್ಯವಹಾರ ಈ ರಾಶಿಯವರಲ್ಲಿ ಕಾಣುವುದು. ಕಿರಿಯರಾದರೂ ಹಿರಿಯರ ಮೇಲೆ ತೋರುತ್ತಿರುವ ಅಭ್ಯಾಸ ಇಂತಹದು. ಮಿಥುನರಾಶಿಯಲ್ಲಿ ವಿವಾಹ ಜೀವನ ಕ್ರಮವಾಯಿತು, ಎಂಬುದನ್ನು ಈ ಮೊದಲೇ ನಾವು ತಿಳಿದಿರುವೆವು. ವಿವಾಹಕ್ರಮ ಬಂದಮೇಲೆ ಮಾನವನಲ್ಲಿ ಇದು ನನ್ನ ಮನೆ, ಇದು ನನ್ನ ಕುಟುಂಬ, ಇವರು ನನ್ನ ಮಕ್ಕಳು, ಎಂಬೀ ಭಾವನೆಗಳು ತಲೆದೋರಿದವು. ದೇಶ ಪಾತ್ರಗಳ ಮಹತ್ವದಂತೆ ಈ ವಿಚಾರಗಳು ಆತನಲ್ಲಿ ನೆಲೆಗೊಂಡವು. ಈ ವಿಚಾರ ಭಾವನೆಯೇ ಅಧಿಕಾರದ ರಾಜ ಪಟ್ಟಕ್ಕೆಡೆಗೊಟ್ಟಿತು. ಹೆಂಗಸರು ಈ ಕಾಲದಲ್ಲಿ ಪತಿಯನ್ನೇ ಅಧಿಕಾರಿಗಳನ್ನಾಗಿ ಮಾಡಿ ಪುರುಷರು ರಾಜತನದ ನೆಲೆಗೊಂಡರು. ಇದೇ ಹೊತ್ತಿಗೆ ವರ್ಣಾಶ್ರಮ ಧರ್ಮಗಳುಂಟಾದುವು. ಕರ್ಕಟಕ ರಾಶಿಯನ್ನು ಶೋಧಿಸಿದ ಹೊತ್ತು ರಾಜತನ, ಚತುರ್ವರ್ಣಗಳು ನೆಲೆಗೊಂಡುವು.

ಪಠನ, ಪಾಠನ, ಶಮ, ದಮ, ತಪ, ಶೌಚ, ಶಾಂತಿ, ಕ್ಷಮೆ, ಸರಲತೆ, ಆತ್ಮಜ್ಞಾನ, ಸೃಷ್ಟಿ, ಜ್ಞಾನ, ಶ್ರದ್ಧೆ, ಮತ್ತು ಯಜ್ಞ ಮಾಡುವುದು ಮೊದಲಾದ ಗುಣಕರ್ಮಗಳಿಂದ ಬ್ರಾಹ್ಮಣರಾದರು. ಶೂರತೆ, ತೇಜಸ್ವಿತೆ,

ಧಾರಣಾಶಕ್ತಿ, ದಕ್ಷತೆ, ಯುದ್ಧಕಲಾನಿಪುಣತೆ, ದಾನ, ಅಧಿಕಾರ ಸತ್ತೆಯೇ ಮೊದಲಾದ ಗುಣ ಕರ್ಮಗಳಿಂದ ಕ್ಷತ್ರಿಯರಾದರು. ಕೃಷಿ ಪಶುಪಾಲನೆ, ವಾಣಿಜ್ಯ, ವ್ಯವಹಾರಾದಿ ಉದ್ಯಮಗಳ ಮೂಲಕ ವೈಶ್ಯರಾದರು. ಅನ್ಯರ ಸೇವಾಕರ್ಮದ ಗುಣ ವೃತ್ತಿಯಿಂದ ಶೂದ್ರರಾದರು. ಈ ರೀತಿಯಿಂದ ಚತುರ್ವರ್ಣಗಳ ಸೃಷ್ಟಿಯುಂಟಾಯಿತು. ಮೇಷರಾಶಿ ಕ್ಷತ್ರಿಯನನ್ನು ನಿರ್ಮಿಸಿತು. ಈ ಗುಣವೇ ಮೇಷರಾಶಿಯವರಿಗೆ ಅನ್ಯರನ್ನು ಅಧಿಕಾರಕ್ಕೆ ತರುವುದು, ಉನ್ನತಿಗೆ ತರುವುದೇ ಮೊದಲಾದ ಗುಣಧರ್ಮ ಮೇಷರಾಶಿಯವರಲ್ಲಿ. ವೃಷಭರಾಶಿಯವರಿಗೆ ವೈಶ್ಯಧರ್ಮ. ವ್ಯಾಪಾರಿಯಂತೆ ಹಣಕಾಸಿನ ವಿಚಾರವಲ್ಲೇ ಇವರ ಮನಸ್ಸಿರುತ್ತದೆ. ಕ್ರಯ ವಿಕ್ರಯದ ಸ್ವಭಾವ ವೃತ್ತಿ ಮತ್ತು ಆ ಧರ್ಮದ ಸೃಷ್ಟಿ, ವೃಷಭ ರಾಶಿಯವರ ಪಾಲಿಗೆ. ಸೇವಾ ವೃತ್ತಿ ಶೂದ್ರ ಧರ್ಮವು. ಮಿಥುನದಲ್ಲಿ, ಇದರ ಸೃಷ್ಟಿ ಮಿಥುನ ರಾಶಿಯವರಲ್ಲಿ. ಕರ್ಕಟಕ ಬ್ರಾಹ್ಮಣನ ಸೃಷ್ಟಿಗೆ ಅವಕಾಶಕೊಟ್ಟಿತು. ಬ್ರಾಹ್ಮಣನು ಜ್ಞಾನಿಯಾದರೂ ಅವನು ಅನ್ಯರ ಪೋಷಣೆಗೊಳಗಾಗುತ್ತಾನೆ. ಅನ್ಯರಿಂದ ಪೋಷಣೆಯ ಬಯಕೆ ಈ ರಾಶಿಯವರಲ್ಲಿ, ಅರ್ಥಿಕ ಸಂಪತ್ತಿನ ವ್ಯವಹಾರ ಜೀವನದಲ್ಲಿ ಈ ರಾಶಿಯವರು, ಬೇರೆಯವರ ಖರ್ಚನ್ನು ಬಯಸುತ್ತಿರುವರು. ರಾಜ್ಯದ ಆಡಳಿತೆ, ಅನ್ಯದೇಶಗಳ ಮೇಲೆ ಅಭಿಯೋಗಾದಿ ಕೃತ್ಯಗಳು ಈ ಕಾಲದಲ್ಲಿ ಬಂದುವು. ಅನ್ಯರ ಮೇಲೆ ಅಭಿಯೋಗ ಮಾಡುವ ಧರ್ಮವು ಕರ್ಕರಾಶಿಯಲ್ಲಿ. ಗಣಿತ ಶಾಸ್ತ್ರ, ನೌಕಾ ನಿರ್ಮಾಣಗಳ ಆರಂಭ ಈ ರಾಶಿಯ ಕಾಲದಲ್ಲಿ ಸಂಭವಿಸಿತು. ಈ ಸಮಯದಲ್ಲಿ ಮನುಷ್ಯ ಸಮಾಜದಲ್ಲಿ ಕರ್ಕರಾಶಿಯು ಅಧಿಕಾರ ತಲೆದೋರಿತು. ಪ್ರಾಪಂಚಿಕ ವ್ಯವಸ್ಥೆಯನ್ನು ನೋಡುತ್ತಾ, ಕಷ್ಟ ಸುಖ ಆಪತ್ತು ವಿಪತ್ತು ಮೊದಲಾದ ಅನೇಕ ಕಷ್ಟ ಪರಂಪರೆಗಳನ್ನು ಹೊಂದುತ್ತಾ ಕರ್ಕರಾಶಿ ಉದ್ವೇಗಗೊಂಡಿತು. ವೈರಾಗ್ಯ ಭಾವನೆ ತಲೆದೋರಿತು. ಪರಿಣಾಮವು ವನಸಂಚಾರಕ್ಕಾಯಿತು. ಅಲ್ಲಿ ಯೋಗಾಭ್ಯಾಸದ ಆರಂಭವೂ ಆಯಿತು.

ಕರ್ಕರಾಶಿಯವರು ಸಂಸಾರಿಕ ಬಂಧನಗಳ ಮೂಲಕ ವೈರಾಗ್ಯವನ್ನು ಹೊಂದ ಬೇಕಾಗುತ್ತದೆ. ಶ್ರೀರಾಮನೂ ತನ್ನ ಹೆಂಡತಿಯನ್ನು ಬಿಡಬೇಕಾ

ಯಿತು.' ಶ್ರೀ ರಾಮನು ಪುನರ್ವಸು ನಕ್ಷತ್ರದಲ್ಲಿ ಜನಿಸಿದ್ದು, ಕರ್ಕರಾಶಿ ಯೆಂದು ಗ್ರಂಥಗಳಲ್ಲಿ ಹೇಳಿದೆ. ವಾಲ್ಮೀಕಿಯೇ ಮೊದಲಾದವರು ಶ್ರೀ ರಾಮನ ಗ್ರಹ ಸ್ಥಿತಿಯನ್ನು ವರ್ಣಿಸಿರುವರು. ಶ್ರೀ ರಾಮನು ರಾಜ್ಯ ಹಾಗೂ ಸಂಸಾರಿಕ ತಾಪತ್ರಯದಿಂದ ಅರಣ್ಯ ಸಂಚಾರವನ್ನು ಹೊಂದಿರುವನು. ಈ ರಾಶಿಯವರು ಮಕ್ಕಳು ಇಲ್ಲವೇ ಕುಟುಂಬದ ವಾತಾವರಣದ ಮೂಲಕ ವೈರಾಗ್ಯ ಜೀವನವನ್ನು ಹೊಂದಬೇಕಾಗುವುದು ಪ್ರಸಿದ್ಧನಾದ ತುಲಸೀದಾಸನು ಕರ್ಕರಾಶಿಯವನೆಂದು ತಿಳಿದು ಬರುತ್ತದೆ. ಆತನು ತನ್ನ ಹೆಂಡತಿಯ ಮೂಲಕ ವೈರಾಗ್ಯವನ್ನು ಹೊಂದಿದನು. ಪುರಂದರದಾಸನೂ ಕರ್ಕರಾಶಿಯವನೆಂದು ಹೇಳುತ್ತಿರುವರು. ರತ್ನಾವಳಿ ತುಲಸೀದಾಸನ ಮಡದಿ. ಪ್ರಸಿದ್ಧ ಸಾಹುಕಾರನಾದ ಶ್ರೀನಿವಾಸ ಪುರಂದರದಾಸ. ಈತನು ತನ್ನ ಮಡದಿಯ ಮೂಲಕವೇ ವಿರಕ್ತನಾದನು. ಕರ್ಕರಾಶಿಯವರು ಹಲವರು ಹೆಂಡತಿಯ ಹಾಗೂ ಮಕ್ಕಳ ಮೂಲಕವೇ ವೈರಾಗ್ಯ ಹೊಂದಿರುತ್ತಾರೆ

ಕರ್ಕವು ಚರರಾಶಿ, ಇದು ಜಲಚರ, ಬಹುಪ್ರಸವ, ಮೂಕರಾಶಿ, ಶೀತ ಪ್ರಕೃತಿ, ಕಫಾತ್ಮಕ ದೇಹ, ಪಾಟಲವರ್ಣ, ರಾತ್ರಿ ಫಲರೂಪ ಗೊಳ್ಳುವುದು. ಭಾವಾತ್ಮಕ ರಾಶಿ, ಬಹುಪಾದ ಜೀವಿ. ಮಧ್ಯಾಹ್ನಕಾಲ ಅಂಧತ್ವವನ್ನು ಹೊಂದುವುದು. ಮಧ್ಯ ದೇಹ, ಉತ್ತರ ದಿಕ್ಕು. ಸತ್ವ ಗುಣ. ಕೀಟರಾಶಿ. ಇರುವ ಸ್ಥಾನ-ಬಾವಿ ಕೆರೆ ನದಿ, ಸಮುದ್ರ ಮತ್ತು ನೆಲದಲ್ಲಿ ಜಲ ಮಾಡಿರುವುದು. ನೀಲ ಅಥವಾ ಜಾಮೂನಿನ ಬಣ್ಣ, ಪ್ರಧಾನ ತತ್ವ, ಕ್ಷಮೆ, ಶಾಂತಿ, ಹೃದಯದಲ್ಲಿರುವ ಗುಣ ಸಹಾನುಭೂತಿ, ಧಾತು ಬೆಳ್ಳಿ, ಮೃದುತ್ವ ಶರೀರ ಗುಣ. ಮಾನಸಿಕ ಲಕ್ಷಣ ಕಲ್ಪನೆ ಮತ್ತು ಆಭಾಸಗಳು. ಪ್ರಧಾನ ಲಕ್ಷಣ ಭವಿಷ್ಯವಾದಿತ್ವ. ಮೂಲ ಸ್ವಭಾವ ಶಕ್ತಿಯುತ ಅಧಿಕಾರಸತ್ತೆ. ಈ ರಾಶಿಯವರು ಹಲವರು ಚುಚ್ಚು ಮಾತುಳ್ಳವರು. ಅನ್ಯರನ್ನು ಚುಚ್ಚಿಮಾತಾಡಿ ಮನಸ್ಸನ್ನೋಕೆಡಿಸುವ ಗುಣ ಕಾಣುವುದು.

ಮಾನವನಲ್ಲಿ ಸಹಜವಾಗಿಯೂ ದೈವೀ ಮತ್ತು ಆಸುರೀ ಗುಣಗಳಿರು

ತ್ವವೆ. ಈ ರಾಶಿಯುವರಲ್ಲಿ ದೈವೀ ಗುಣಯುಕ್ತರು ಅನ್ಯರ ಕಲ್ಯಾಣಸಾಧನೆಗಾಗಿ ದೊಡ್ಡ ತ್ಯಾಗವನ್ನು ಮಾಡುವರು. ಆಸುರೀ ಗುಣಯುಕ್ತರು. ತನ್ನ ಸ್ವಾರ್ಥಕ್ಕಾಗಿ ಅನ್ಯರನ್ನು ವಿನಾಶಗೊಳಿಸುವರು. ಹೃದಯದಲ್ಲೀ ಕರ್ಕರಾಶಿಯ ಪ್ರಭಾವ.

ನಾನಾ ಬಗೆಯ ಕಷ್ಟಗಳನ್ನು ಸಹಿಸುವ ಶಕ್ತಿ ಕರ್ಕರಾಶಿಯವರಿಗಿರುವುದು. ಪ್ರಾಪಂಚಿಕ ವಿಷಯದಲ್ಲಿ ಅತ್ಯಾಸಕ್ತಿ ಇರುತ್ತದೆ. ಬುದ್ಧಿ ಸ್ಥಿರವಾದರೂ ವಿಕಲ್ಪಾತ್ಮಕವಾಗಿರುವುದು. ಯೋಗಾಭ್ಯಾಸಕ್ಕೆ ಸ್ಥಿರ ಬುದ್ಧಿ ಬೇಕು. ಅನಾಸಕ್ತಿಯೂ ವೇದಾಂತಕ್ಕೆ ಅಗತ್ಯ. ತ್ಯಾಗ, ಪರೋಪಕಾರ ವೃತ್ತಿಗಳ ಮೂಲಕ ಸಾಧು ಜನರ ಗುಣ ಧರ್ಮ ಬರುವುದು. ಪ್ರಾಪಂಚಿಕ ಜೀವನವನ್ನು ಹೊಂದಿ ಆ ಮೇಲೆ ಪರಮಾರ್ಥದ ಕಡೆಗೆ ಹರಿವು ಈ ರಾಶಿಯವರಿಗುಂಟಾಗುತ್ತದೆ. ಜನತೆಗೆ ಜ್ಞಾನೋಪದೇಶವನ್ನು ಮಾಡುತ್ತಾ ಮಠವನ್ನು ನಿರ್ಮಿಸುವರು ತಮ್ಮ ಶಿಷ್ಯರನ್ನಾಗಿ ಯಾರನ್ನೂ ಆರಿಸುವುದಿಲ್ಲ. ಆದ್ದರಿಂದ ಮರಣ ನಂತರ ಅವ್ಯವಸ್ಥೆಯಾಗುವುದು. ತಮ್ಮ ಜೀವನದ ಕಾಲ ದೊಡ್ಡ ಸಂಸ್ಥೆಯನ್ನು ನಿರ್ಮಿಸುವರು. ಆ ಸಂಸ್ಥೆ ಕೋಟಿಗಟ್ಟಲೆ ಧನ ವೈಭವವನ್ನು ಹೊಂದುವುದು. ಇದರ ಫಲಸಂಪತ್ತು ಅನ್ಯರಿಗಾಗುತ್ತದೆ. ಕುಟುಂಬಿಯರಿಗಿಲ್ಲ. ಸಿದ್ಧಾರೂಢ ಸ್ವಾಮಿಗಳು ಕನ್ನಡಿಗರು. ಅವರು ಧಾರವಾಡ ಜಿಲ್ಲೆಯ ಹುಬ್ಬಳ್ಳಿಯವರು. ಅವರು ದೊಡ್ಡ ಜ್ಞಾನಿಗಳಾಗಿದ್ದರು. ನಲುವತ್ತು ವರುಷವರೆಗೆ ಬ್ರಹ್ಮಚರ್ಯದಲ್ಲಿದ್ದು ಯೋಗಾಭ್ಯಾಸದ ಮೂಲಕ ಸಿದ್ಧ ಪುರುಷರಾದರು. ಭಾರತದ ಹಲವು ಕಡೆ ಸಂಚರಿಸಿ ಹುಬ್ಬಳ್ಳಿಯಲ್ಲಿ ನೆಲಸಿದರು. ಸಿದ್ಧಿಯ ಪ್ರಭಾವದಿಂದ ಅನೇಕ ಜನರು ಬರಲಾರಂಭಿಸಿದರು. ಜನರಿಗೆ ಬೋಧೆಯನ್ನೂ ಕೊಡುತ್ತಿದ್ದರು. ಆಗ ಅವರು ಒಂದು ಮರದ ಕೆಳಗೆ ನೆಲಸಿರುತ್ತಿದ್ದರು. ದೇಹದಲ್ಲಿ ಬಟ್ಟೆಬರೆಗಳಿರುತ್ತಿದ್ದಿಲ್ಲ. ನೆಲದಲ್ಲಿಯೇ ನಿದ್ರಿಸುತ್ತಿದ್ದರು. ಇದನ್ನು ನೋಡಿ ಜನರು ಮಠವನ್ನು ಕಟ್ಟಿಸಿದರು. ಈ ಸಮಯದಲ್ಲಿ ಅವರೂ ಮಠದ ವ್ಯವಸ್ಥೆಗೆ ಬಿದ್ದರು. ಲಕ್ಷಾಧಿಕ ಸಂಪತ್ತಿನ ಮಠವಾಯಿತು. ಮನೆಯನ್ನು ಕಟ್ಟಿಸಿ ಬಾಡಿಗೆಗೆ ಕೊಡಲಾರಂಭವಾಯಿತು. ಬೇಂಕಿನ ವ್ಯವಹಾರದ ನೆಲೆ ಸಿದ್ಧಾ

ದೂಢರಿಗಾಯಿತು. ಧಾರವಾಡದ ಕೋರ್ಟಿನಲ್ಲಿ ಇದಕ್ಕೆ ಬೇಕಾದ ಸಾಕ್ಷ್ಯ ಗಳಿವೆ. ಈ ಪ್ರಚಂಡ ಸಂಪತ್ತಿನ ಲೋಭದಿಂದ ವಿಷವನ್ನು ಚೇರಿಯುವರು ಕಾಡಿಸಿದರೆಂದು ಕೇಳಿ ಬರುತ್ತಿದ್ದ ಅವರ ಅಂತ್ಯ ಅಲ್ಲಿಗಾಯಿತು. ಆ ಮೇಲೆ ಅವರ ಶಿಷ್ಯರಲ್ಲಿ ಜಗಳಾಟವಾಯಿತು. ಅವರು ಬ್ರಹ್ಮಚರ್ಯ ಜೀವನವನ್ನು ಹೊಂದಿ ಯೋಗಭ್ರಷ್ಟರಾದುದೇ ಕಂಡು ಬರುತ್ತದೆ.

ಈ ರಾಶಿಯುವರು ಎಷ್ಟು ಉನ್ನತಾವಸ್ಥೆಯನ್ನು ಹೊಂದುವರೋ ಅಷ್ಟೇ ನೀಚಾವಸ್ಥೆಯನ್ನೂ ಹೊಂದುವರು. ದೊಡ್ಡ ದೊಡ್ಡ ಸಂಸ್ಥೆಗಳನ್ನು ನಿರ್ಮಿಸುವರು. ಅವರ ಮರಣಾ ನಂತರ ಅದು ಅನಾಥವಾಗುವುದು.

ಪಂಡಿತ ಮದನ ಮೋಹನ ಮಾಲವೀಯರು ಕರ್ಕಟಕರಾಶಿಯವರು. ಅವರೂ ಹಿಂದೂ ಯುನಿವರ್ಸಿಟಿಯ ನಿರ್ಮಾತರು. ಇದು ಇಂದೂ ಇದೆ. ಅರವಿಂದ ಘೋಷರು ಕರ್ಕಟಕ ರಾಶಿಯವರು. ಇವರೆಲ್ಲಾ ವಿಭೂತಿ ಪುರುಷರು.

ಜೀವನದಲ್ಲಿ ಕರ್ಕಟಕ ರಾಶಿಯವರ ಗುಣವನ್ನು ದೈವೀ ಮತ್ತು ಆಸುರೀ ಸಂಪತ್ತುಗಳ ಮೂಲಕವೇ ನಿರ್ಣಯಿಸ ಬೇಕಿದೆ. ಅನ್ಯಥಾ ಫಲೋಪಲೋಪದೇಶವು ನಿರರ್ಥಕ. ಗ್ರಹರೇ ಪಲೋಪದೇಶಕ್ಕೆ ಮುಖ್ಯ ಕಾರಣರು. "ಸಮಾನಶೀಲವ್ಯಸನೇಷುಸಖ್ಯಂ" ಎಂಬ ಮಾತು ಇವರ ಸಖ್ಯ ವಿಚಾರವಲ್ಲಿ ಅನ್ವಯಿಸುವುದು.

## ಸಿಂಹ

ಸಿಂಹ ಕಾಲಚಕ್ರದ ಐದನೆಯ ರಾಶಿ. ನಾಮಕರಣವೇ ಈ ರಾಶಿ ಸ್ವರೂಪವನ್ನು ವ್ಯಕ್ತಪಡಿಸುತ್ತಿರುವುದು. ರವಿ ಈ ರಾಶಿಯ ಅಧಿಪತಿ. ರವಿಗೆ ಸಿಂಹ ಸ್ವಕ್ಷೇತ್ರ ಮತ್ತು ಮೂಲತ್ರಿಕೋಣ ರಾಶಿ, ಇದು ಸ್ಥಿರರಾಶಿ. ಸಿಂಹ ಅರಣ್ಯಜೀವಿ, ಮೃಗ ರಾಜ, ಅರಣ್ಯ ಜೀವಿಯಾದರೂ ಸ್ವಾತಂತ್ರ್ಯ ಪ್ರೇಮಿ, ಸಾಹಸಿ ಮತ್ತು ಶೂರಜೀವಿ. ಜೀವನದ ಶೂರತನ ಸಾಹಸ ಧೈರ್ಯಗಳನ್ನು ಸಿಂಹದಿಂದಲೇ ಕಂಡುಕೊಳ್ಳ ಬೇಕು. ಈ ಸಾಹಸ ಜೀವಿಯೂ ಮಹಾಕಾಯನೂ, ಸತ್ವಶಾಲಿಯೂ ಆದ ಆನೆಯನ್ನು ವಧೆ ಗೊಳಿಸಿಬಿಡುವುದು. ಇದು ಇದರ ಸಾಹಸ ಧೈರ್ಯ ಶೂರತೆಗಳ ವರ್ತನೆ

ಗಳಿಂದಲೇ ಆಗಿದೆ. ಜನತೆಯಲ್ಲಿ ಈ ಲಗ್ನ ಅಥವಾ ರಾಶಿ ಸಂಪರ್ಕದವನಿಗೆ ಇರುತ್ತಿದ್ದ ಇದೇ ಬಗೆಯ ಶಕ್ತಿಯನ್ನು ಅವರಲ್ಲಿ ಕಾಣುವೆವು. ನೋಡು ವುದಕ್ಕೆ ಅಲ್ಪರಾಗಿ ಕಂಡು ಬಂದರೂ ತೋರುವ ವರ್ತನೆಯು ಮಹತ್ತಾ ದುದು.

ಸಿಂಹ ಅದು ತನ್ನ ಕೆಲಸವನ್ನು ಮುಂದುವರಿಸುತ್ತಾ ಹೋಗುವುದು. ಹೋಗುವಾಗ ಅದರ ಕೇಸರಗಳು ಅದರ ಕಣ್ಣಿಗೆ ಮುಸುಕುವವು ಆ ಮೇಲೆ ಅದು ಮುಖವನ್ನು ಕೊಡವಿ ಹಿಂದಕ್ಕೆ ನೋಡುವುದು. ಇದಕ್ಕೇ "ಸಿಂಹಾವಲೋಕನ ನ್ಯಾಯ" ವೆಂದು ಹೆಸರು. ಮುಂದೆ ನಡೆದು ಹಿಂದಕ್ಕೆ ನೋಡುವುದು. ತಾನು ಬಂದ ದಾರಿಯನ್ನು ಕಾಣುವುದು. ಈ ನ್ಯಾಯ ವಿಚಾರ. ಆದರೇ ಇರಲಿ ಈ ರಾಶಿಯವನು ಕೆಲಸಮಾಡುತ್ತಾ ಮುಂದು ವರಿಯುತ್ತಿರುವನು. ಮುಂದೆಬಂದ ಬಳಿಕ ಆತನು ತಾನು ಮಾಡಬೇಕಾದ ಕೆಲಸಗಳನ್ನು ವಿವೇಚನೆಗೊಂಡು ಮಾಡಲಾರಂಭಿಸುವನು. ಕೆಲಸಗಳು ಈ ರಾಶಿಯವನಿಗೆ ಇದ್ದೇ ಇದ್ದು ಅವುಗಳಿಷಯಲ್ಲಿ ಹಿಂದಿನದನ್ನು ಮಾಡು ತ್ತಲಿರುವನು. ಹೊಸತುಗಳು ಬೇಗನೆ ಆಗುತ್ತವೆ. ಕೆಲಸದ ಮಧ್ಯದಲ್ಲಿ ಬೇರೆ ವಿಚಾರಗಳು ಬಂದು ತಾನು ಮೊದಲಾರಂಭಿಸಿದ ಕೆಲಸವನ್ನು ಅಲ್ಲಿಯೇ ಬಿಟ್ಟು ಬಂದ ಕೆಲಸಕ್ಕೆ ಕೈ ನೀಡಿ ಮೊದಲ ಕೆಲಸ ಹಿಂದೆಯೇ ಬೀಳುವುದೂ ಈ ರಾಶಿಯವರ ಪಾಲಿಗಾಗುವುದು. ಅನ್ಯಾಯ ಅಧರ್ಮಗಳನ್ನು ಮಾಡು ತ್ತಿಲ್ಲ.

ಸಿಂಹ ತಾನು ಅನ್ಯರನ್ನು ಆಶ್ರಯಿಸುವುದಿಲ್ಲ. ತಾನು ವಧಿಸಿದ ಪ್ರಾಣಿಯನ್ನುಂಡು ಉಳಿದುದನ್ನು ಅಲ್ಲಿಯೇ ಬಿಡುವುದು. ಅದು ಅನ್ಯ ಜೀವಿಗಳಿಗಾಸ್ಪದವಾಗುವುದು. ಆ ಮೇಲೆ ಪುನಃ ಅದು ಆಹಾರವನ್ನು ಹುಡುಕ ಹೋಗುವುದು. ಆಹಾರವನ್ನು ಸಾಧಿಸಿಕೊಳ್ಳುವುದು, ಅತಿಯಾ ದುದನ್ನು ಅಲ್ಲೇ ಬಿಡುವುದು, ಈ ಜೀವನ ಅದಕ್ಕಿದ್ದ ಎಲ್ಲಾ ವಿಷಯ ವಲ್ಲಿ ಅದು ಸ್ವತಂತ್ರ ಜೀವಿಯು; ಇಂತೆಯೇ ಸಿಂಹರಾಶಿಯವಾ ಲಗ್ನದವನು, ಸ್ವಾರ್ಜಿತ ಸಂಪತ್ತನ್ನು ಭೋಗಿಸುತ್ತಿದ್ದ ಅವನು ದುಡಿದ ಸಂಪತ್ತು ಅನ್ಯರ ಉಪಭೋಗಕ್ಕೂ ದಿನೇ ದಿನೇ ಬೀಳುತ್ತಿದ್ದ ಪ್ರತಿನಿತ್ಯ ಆತನು ತನಗೆ

ಬೇಕಾದ ಸಂಪತ್ತನ್ನು ಸಂಪಾದಿಸುತ್ತಲೂ ಅದಕ್ಕಾಗಿ ದುಡಿಯುತ್ತಲೂ ಇರುವವನಲ್ಲದೆ ಅದನ್ನು ಅನ್ಯರು ಅಧಿಕವಾಗಿ ಉಣ್ಣುತ್ತಿರುವರು. ಜೀವನ ದಲ್ಲಿ ಶಾಂತಿ ಕಡಮೆ. ಕೌಟುಂಬಿಕ ವಾತಾವರಣ, ಅಂತಹುದಾಗಿರುತ್ತದೆ. ಇಲ್ಲವೇ ನಾಯಕತನವನ್ನು ವಹಿಸಿ ಅದರಿಂದಲೂ ಕಷ್ಟವನ್ನೇ ಅನುಭವಿ ಸುತ್ತಿರುವನು.

ಕಾಡಲ್ಲಿ ಸಿಂಹ ಮೃಗರಾಜನಾಗಿರುವಂತೆ ಮನುಷ್ಯನು ಪ್ರಾಪಂಚಿಕ ಜೀವನದಲ್ಲಿ ಮನುಷ್ಯರ ಮುಂದಾಳುವಾಗಿರುವನು. ಕರ್ಕ ರಾಶಿಯು ಸಿಂಹ ವನ್ನು ರಾಜನಾಗಿ ಮಾಡಿತು. ಅದು ರಾಣಿಯೆನಿಸಿತು. ಎರಡೂ ಜೊತೆ ಗೂಡಿ ರಾಜ್ಯಭಾರಕ್ಕಾರಂಭಿಸಿದುವು. ನ್ಯಾಯ, ಗೃಹ, ಮೊದಲಾದ ಶಾಸನ ಖಾತೆಯು ಮಂತ್ರಿ ಮಂಡಲಗಳಾದುವು. ಮೊತ್ತ ಮೊದಲು ಗೃಹಖಾತೆಯು ಸೇನಾವಿಭಾಗವಾಯಿತು. ಆ ಮೇಲೆ ಪೋಲೀಸರದಳವಾಯಿತು. ಜನರು ತಮ್ಮ ತಮ್ಮ ಕೆಲಸವನ್ನು ಮಾಡಿ ಸುಖವಾಗಿರುತ್ತಿದ್ದರು. ಈ ಕಾಲದಲ್ಲಿ ಸಿಂಹ ರಾಶಿಯು ಅಧಿಕಾರಾರಂಭವಾಯಿತು. ಸಿಂಹ ರಾಶಿಯು ಪ್ರಭಾವ ಹೊಟ್ಟೆಯಲ್ಲಿ. ಹೊಟ್ಟೆಗೆ ಸಂಬಂಧಿಸಿದ ವಿಚಾರವನ್ನು ಈ ರಾಶಿಯಿಂದ ಹೇಳಬೇಕು.

ಸಿಂಹ ರಾಶಿಯು ಪಾಪಗ್ರಹರು ಹೊಟ್ಟೆ, ಕಣ್ಣು, ಹೃದಯ ವೇದನೆ ಮತ್ತು ಉಷ್ಣ ರೋಗಗಳನ್ನುಂಟು ಮಾಡುತ್ತಿರುವರು. ಸಿಂಹ ರಾಶಿಯು ಬಲಿಷ್ಠನಾದ ಪಾಪನು ಈ ಬಗೆಯ ಎಲ್ಲಾ ರೋಗಗಳನ್ನು ಕೊಡಬಹುದು. ರವಿ ಎಲುಬಿಗೆ ಕಾರಕನಾಗುತ್ತಾನೆ. ಎಲುಬಿನ ನೋವು, ಮುರಿಯುವಿಕೆ ಗಳೂ ಇದರಿಂದ ಚಿಂತಿಸಬೇಕಾಗಿದೆ.

ಪ್ರಕಾಶಕ ಗ್ರಹದಲ್ಲಿ ರವಿ ಪ್ರಧಾನನು, ಚಂದ್ರ ಎರಡನೆಯನು, ಸಿಂಹ ಪ್ರಕಾಶ ಗ್ರಹರಾಶಿ. ಈ ರಾಶಿಯವನು ಆದ್ದರಿಂದಲೇ ಜೀವನದಲ್ಲಿ ಅನ್ಯರಿಗೆ ಬೆಳಕನ್ನು ಕೊಡುವವನಲ್ಲದೆ ಯಶಸ್ವಿಯಾಗಿರುವನು ಈತನ ಇರವು ಅನ್ಯರ ಪ್ರಕಾಶಕ್ಕಾಗಿ, ಜೀವ ಕೋಟಿಯ ಬೆಳಗುವಿಕೆಗಾಗಿ, ಮಾರ್ಗ ದರ್ಶನಕ್ಕಾಗಿ. ಕುಟುಂಬ ಜೀವನದಲ್ಲಿಯೂ ಇದೇ ನೆಲೆ ಅವರಿಗಿದ್ದು ಸ್ವಯಂ ಪ್ರಕಾಶಕರು. ಸ್ವಪ್ರಕಾಶವನ್ನೇ ಎಲ್ಲೆಡೆಯಲ್ಲೂ ಬೀರುವರು.

ಅಧಿಕಾರಲಾಲಸೆಯು ವರ್ತನೆಯು ಇವರದಲ್ಲ. ಅಧಿಕಾರಕ್ಕಾಗಿ ಹೋರಾಡು ವುದಿಲ್ಲ. ಅಧಿಕಾರ ತನ್ನಿಂದ ತಾನೇ ಬಂದುಬಿಡುತ್ತದೆ. ಜೀವನದ ಹೋರಾ ಟದಲ್ಲಿ ಯಾವ ಅಧಿಕಾರವನ್ನೂ ಬಗೆಯದೆ. ನಡೆಯುತ್ತಿರುವರಾದರೂ ಆ ಸ್ವ ಶಕ್ತಿಯಿಂದ ಅನ್ಯರು ಆಶ್ರಯಕ್ಕೆ ಬರುತ್ತಿರುವರು. ಅಧಿಕಾರಾರೂಢರಾಗಿ ನ್ಯಾಯಧರ್ಮದಿಂದಲೇ ನಡೆಯುವರಾದರೂ ಸಿಂಹವು ಕ್ರೂರ ಮೃಗ, ಹಿಂಸ್ರಜೀವಿಯೆಂದು ಶಪಿಸುತ್ತಿರುವಂತೆ, ಅನ್ಯರು ವೃಥಾ ಅಪವಾದದ ಹೊರೆ ಯನ್ನು ಹೊರಿಸುತ್ತಿರುವರು. ಈ ಅಪವಾದದ ಮೂಲಕ ಕುಟುಂಬದಿಂದಲೂ ಅಧಿಕಾರಸತ್ತೆಯಿಂದಲೂ ದೂರವಾಗಿದ್ದುಕೊಳ್ಳುವುದುಂಟು; ದೂರವಾ ಗಿದ್ದು ಅವರು ತಮ್ಮ ನ್ಯಾಯಧರ್ಮಗಳನ್ನು ತ್ಯಾಗಬುದ್ಧಿಯನ್ನೂ ತೋರು ತ್ತಿರುವರಲ್ಲದೆ ಅನ್ಯರದನ್ನು ಉಣ್ಣುವುದಿಲ್ಲ. ನಿರಕ್ತಿಯು ಆಶ್ರಿತರಲ್ಲಿ ಉಂಟಾ ಗುವುದು. ವಿರಕ್ತರಾಗಿ ದೂರವಿದ್ದುಕೊಳ್ಳುವುದೇ ಇದರಿಂದ ಈ ರಾಶಿಯು ವರ ಚಟವಾಗುತ್ತದೆ. ಜನರು ರಕ್ಷಣಾಸಕ್ತರಾಗಿ ಬರುವುದೂ ಅವರಿಂದ ನೆಮ್ಮದಿಗೊಳ್ಳದಿರುವುದೂ ಇದರಿಂದ ಈ ರಾಶಿಯುವರ ಪಾಲಿಗೆ ಒದಗುವ ಜೀವನ ಧರ್ಮ.

ಪ್ರಾಚೀನರು ಸ್ಥಿರರಾಶಿ, ನಿರ್ಜಲ, ಭೂವಿಸ್ಥಲ, ಅಲ್ಪಪ್ರಸವ, ಉಷ್ಣ, ಚತುಷ್ಪಾದ, ರೂಕ್ಷ, ಅತಿ ತೇಜ ದಿನಾಧಿಕಾರಿ, ವಂಧ್ಯಾರಾಶಿ ಯೆಂದೂ ಕೆಂಪು, ಕೇಸರ ಬಣ್ಣವೆಂದೂ, ವಿಷಮಸ್ವರೂಪವೆಂದೂ ದೀರ್ಘ ದೇಹ, ಪುರುಷತತ್ವ, ಪೂರ್ವದಿಕ್ಕೆಂದೂ ವರ್ಣಿಸಿರುವರು. ರಜೋಗುಣ, ಪಶುರಾಶಿ. ಉಳಕೊಳ್ಳುವ ಸ್ಥಾನ ದಟ್ಟವಾದ ಕಾಡು ಅಥವಾ ದೊಡ್ಡ, ಉನ್ನತವಾದ ಶಿಖರ, ಉನ್ನತ ಗೃಹಗಳಾಗಿರುವವು. ಕೆಲವರು ಕಾಡಿನಂತಹ ಸ್ಥಳದಲ್ಲಿರುವರು. ಮತ್ತೆ ಕೆಲವರು ಸಣ್ಣ ಗುಹೆಯಂತೆ ಇಕ್ಕಟ್ಟಾದ ಸ್ಥಳ ಗಳಲ್ಲಿರುವರು. ಕೆಲವರು ದೊಡ್ಡ ಸೌಧಗೃಹಗಳಲ್ಲಿ ನೆಲಸುವರು. ಅಗ್ನಿ ತತ್ವವಾಗಿರುವುದು ಪಿಂಡಪ್ರಕೃತಿಯು ತತ್ವ ತೇಜವಾಗಿರುವುದು.

ಹೃದಯವು ವಿಶ್ವಾಸಪೂರ್ಣವಾಗಿರುತ್ತದೆ. ಅವಿಶ್ವಾಸವಿರುವುದಿಲ್ಲ. ಇದರಿಂದ ಎಲ್ಲರನ್ನೂ ನಂಬಿ ಸಂಪತ್ತಿನ ವಿಷಯದಲ್ಲಿ ಮೋಸಕ್ಕೊಳಗಾಗು ವುದೇ ಸಂಸಾರ ಜೀವನದ ಧೋರಣೆಯಾಗುತ್ತದೆ.

## ಕನ್ಯಾ

ಕನ್ಯಾ ರಾಶಿ ಕಾಲಚಕ್ರದ ಆರನೆಯ ರಾಶಿ. ಕನ್ಯೆಯೊಬ್ಬಳು ಒಂದು ಕೈಯಲ್ಲಿ ಬೆಂಕಿ ಮತ್ತೊಂದು ಕೈಯಲ್ಲಿ ಸಸಿಗಳನ್ನು ಹಿಡಿದು ದೋಣಿಯ ಮೇಲಿರುವಳು. ಇದೇ ಈ ರಾಶಿ ಸ್ವರೂಪ ಹೆಂಗುಸು ಸಂಸಾರದಲ್ಲಿದ್ದು ಹೇಗೆ ನಡೆಯುವಳೆಂಬುದನ್ನು ಈ ರಾಶಿಯ ಸ್ವರೂಪವು ಚಿತ್ರಿಸುವುದು. ದೋಣಿಯ ಮೇಲೆ ಆಕೆ ಇರುವಳು. ಆ ದೋಣಿ ಎಲ್ಲಿಗೆ ಹೋಗುವುದು, ಎಲ್ಲಿ ಸೇರುವುದೆಂಬುದನ್ನು ಆಕೆ ತಿಳಿಯಳು. ಗಾಳಿ ಬಂದಂತೆ ಆ ದೋಣಿ ಚಲಿಸುತ್ತಿರುವುದು. ದೋಣಿ ಹರುಕು ಮುರುಕಾದರೆ ಮುಳುಗಿಯೂ ಹೋಗುವುದು. ಅಂತೆಯೇ ಈ ರಾಶಿಯವರ ಜೀವನದಲ್ಲಿರುವ ಲಕ್ಷ್ಯ ಸ್ವರೂಪವನ್ನು ಕಾಣುವೆವು. ಸಂಪತ್ತು ಹಿರಿಯರದಿದ್ದರೆ ಅಥವಾ ಅನ್ಯರದ್ದು ದೊರಕಿದರೆ ಅದರಿಂದ ಜೀವನವನ್ನು ನಡೆಯಿಸುವರು. ಅವರಿರುವಲ್ಲಿ ಸಂಪತ್ತು ಹೇಗಿದೆ, ಹೇಗೆ ನಡೆಯಬೇಕೆಂಬುದನ್ನು ಕಂಡುಕೊಳ್ಳರು. ಸಂಪತ್ತಿನ ವ್ಯವಹಾರವನ್ನು ನಡೆಸುತ್ತಿರುವರಾದರೂ ಆ ಸಂಪತ್ತಿನ ನೆಲೆಯನ್ನು ಅವರು ಕಾಣರು. ಭೋಗಾಧಿಕಾರವನ್ನು ಲಕ್ಷಿಸಿರುವರು. ಗಾಳಿಯು, ದೋಣಿಯನ್ನು ಪ್ರೇರಣೆಗೊಳಿಸುವಂತೆ ಹಿತದ ನುಡಿಗಳಿಂದ ಯಾರು ಬರುವರೋ ಅವರನ್ನೇ ಪ್ರೇರಕರೆಂದು ತಿಳಿದುಕೊಂಡು ಅದರಿಂದ ಕಷ್ಟಕ್ಕೊಳಗಾಗುವ ಸಂಘಟನೆಯೂ ಉಂಟು. ಅಧಿಕಾರ ವ್ಯವಹಾರವನ್ನೇ ಬಯಸುತ್ತಿರುವರು. ಕನ್ಯೆಯು ಬೆಂಕಿಯನ್ನೂ ಸಸಿಯನ್ನೂ ಹಿಡಿದಿರುವಳು. ಅವರಿದ್ದಲ್ಲಿ ಒಂದು ಕಡೆಗೆ ಬೆಂಕಿಯನ್ನೂ ಇನ್ನೊಂದು ಕಡೆ ಸಸಿಯಸೊಂಪನ್ನೂ ಕೊಡುತ್ತಿರುವರು. ಈ ಎರಡೂ ಒಂದೇ ಕಡೆಯಲ್ಲಿದ್ದು ನಡೆಯಿಸುತ್ತಿರುವರು. ಅಧಿಕಾರಕ್ಕೆ ಇದರಿಂದ ಧಕ್ಕೆ ತಗಲುವುದೂ ಉಂಟು. ಮಾತ್ರವಲ್ಲದೆ ಸೇಡಿನ ಈರ್ಷ್ಯೆ ಬುದ್ಧಿಯೂ ಕಾಣುತ್ತಿರುವುದು.

ಸಿಂಹ ರಾಶಿ ಪತಿ. ಕರ್ಕ ರಾಶಿ ಪತ್ನಿ. ಕನ್ಯಾ ಪುತ್ರಿ. ರಾಶಿಚಕ್ರದಲ್ಲಿ ಇದು ದ್ವಿತೀಯ ಕುಟುಂಬ ರಾಶಿ. ಒಂದೇ ಕುಟುಂಬದಲ್ಲಿ ಎರಡನೆಯ ಕುಟುಂಬದ ನೆಲೆಯನ್ನು ತಂದುಕೊಳ್ಳುವ ರಾಶಿಯಿದು. ಇದು ಅಧಿಕಾರಶಕ್ತಿಯ ಕುಟುಂಬಕ್ಕೆ ಸೇರುವುದು. ಸಿಂಹರಾಶಿಯು ರಾಜ್ಯವನ್ನು

ಸ್ಥಾಪನೆಗೊಳಿಸುವ ರಾಶಿ. ಅದರ ನಂತರ ರಾಜಕಾರ್ಯವಿಭಾಗ. ರಾಜ ಕಾರ್ಯದಲ್ಲಿ ಬೇರೆ ಬೇರೆ ಖಾತೆಗಳಿರುತ್ತವೆ. ಈ ರಾಶಿಯ ಅಧಿಕಾರವು ರಾಜಕೀಯ ಕಾರ್ಯದಲ್ಲಿ ಭೂಸಂಬಂಧ ಮತ್ತು ಆರ್ಥಿಕಾಧಿಕಾರ ಸಂಬಂಧದ್ದು. ಕ್ರಯ ವಿಕ್ರಯಾದಿಗಳೂ ಇದರಲ್ಲಿ ಸೇರುತ್ತವೆ. ತೆಗೆಯುವ ಕೊಡುವ ಅಧಿಕಾರ ಧೋರಣೆಯಲ್ಲಿ ಈ ರಾಶಿಗೆ ಸ್ಥಾನ. ಇದರಿಂದ ಈ ರಾಶಿಯವರಲ್ಲಿ ಈ ಒಂದು ಸ್ವರೂಪವನ್ನೂ ಕಂಡುಕೊಳ್ಳಬಹುದು. ವಿದ್ಯಾ ಜ್ಞಾನಾದಿಗಳು ಇರುತ್ತವೆ. ಸ್ತ್ರೀಯು ಶಿಕ್ಷಿತಳಾದರೂ ಆಕೆ ಕುಟುಂಬದ ಅಧಿಕಾರವನ್ನು ನೋಡುವಂತೆ ಸ್ವಾತಂತ್ರ್ಯವನ್ನು ಬಯಸಿದ ಜೀವನವೇ ಇವರದು. ತಾವು ಸ್ವತಂತ್ರರೆಂದು ತೋರ್ಪಡಿಸುವ ಹವ್ಯಾಸದಿಂದ ಅಧಿಕಾರ ಪುರುಷರ ವಿರೋಧವನ್ನು ಹೊಂದುತ್ತಿರುವರು.

ಈ ರಾಶಿಯವರಲ್ಲಿ ವಿಚಿತ್ರವಾದ ಗುಣ ಧರ್ಮವನ್ನು ಕಾಣುವೆವು. ಈ ರಾಶಿಯವರಲ್ಲಿ ಸಪ್ತಮದಲ್ಲಿ ಮತ್ತು ಲಗ್ನರಾಶಿಯಲ್ಲಿ ಪಾಪಗ್ರಹರು ಇರುವವರು ಬಹು ವಿವಾಹಗೊಳ್ಳುವುದೂ ಉಂಟು. ವ್ಯಭಿಚಾರಜೀವನಕ್ಕೂ ಹೇಸದವರಾಗುವುದು ಇದೆ. ಪಾಪಗ್ರಹ ಸಂಪರ್ಕ ಜನ್ಮರಾಶಿ ಮತ್ತು ಸಪ್ತಮದಲ್ಲಿ ಇಲ್ಲದವರು ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸುವುದುಂಟು. ವೇದಾಂತ ವಿಚಾರದಲ್ಲಿ ಬಹವಾಸ ಗೊಳ್ಳುವರು. ಅನ್ಯರಲ್ಲಿ ವಿಶ್ವಾಸ ಗೊಳ್ಳುವ ಇಚ್ಛೆಯಿರುವುದಿಲ್ಲ. ಚಿಕಿತ್ಸಾಬುದ್ಧಿಯೇ ಹೆಚ್ಚಿರುವುದು. ನಾಸ್ತಿಕ ವರ್ತನೆಯವರಾದರೂ ಡಾಂಭಿಕದೇವಭಕ್ತಿಯನ್ನು ತೋರುತ್ತಿರುವರು. ಸೋಂಟದ ಸ್ಥಾನ ಈ ರಾಶಿಗೆ. ಅರ್ಧಮರ್ಧವಾಗಿ ಎಲ್ಲಾ ವಿಷಯಗಳಿಗೂ ತಲೆಕೊಡುತ್ತಿದ್ದು ಒಂದರಲ್ಲಿಯೂ ಸಂಪೂರ್ಣ ಜ್ಞಾನವಿರುವುದಿಲ್ಲ. ಹೀಗಿದ್ದರೂ ತಾವು ಯಾವ ವಿಚಾರದಲ್ಲಿಯೂ ಬುದ್ಧಿವಂತರೆಂದು ಹೇಳಿಕೊಳ್ಳುತ್ತಿರುವರು. ಕಾಮೇಚ್ಛೆ ಹೆಂಗುಸಿನಲ್ಲಿರುವಂತೆ ಆರ್ಥಿಕ, ಅಧಿಕಾರ ಕಾಮುಗಳು ಈ ರಾಶಿಯವರಲ್ಲಿ ತುಂಬಿರುವವು.

ಕನ್ಯಾದ್ವಿಸ್ವಭಾವ ರಾಶಿ, ಸಂಧ್ಯಾ ರಾಶಿ, ರಾತ್ರಿ ಇದರ ಅಧಿಕಾರ, ಪೃಥಿವೀ ತತ್ವ, ಜಲಾಶ್ರಯಿನಾದ್ವಿಪಾದ ರಾಶಿ. ಅಲ್ಪಪ್ರಸವ, ಯುಗ್ಮರಾಶಿ, ಸೀರಾಶಿ, ದಕ್ಷಿಣ ದಿಕ್ಕು, ಮಧ್ಯಾಹ್ನಕಾಲ ಅಂಧ ಸ್ವಭಾವ, ತಾಮಸೀ

ಗುಣ, ಕಾಡು ಅಥವಾ ಸ್ತ್ರೀಯರೊಂದಿಗೆ ಆದುವ ಸ್ನಾನ. ಪ್ರಕೃತಿಯು ಮೂಲತತ್ವ ಶುದ್ಧತೆ, ಸೀಲಬಣ್ಣ, ಕರ್ತವ್ಯಾಸಕ್ತಿ ಹೃದಯ ಧರ್ಮ, ಕೈಗಾರಿಕೆ, ಯಾಂತ್ರಿಕ ಸಂಪತ್ತು, ಅಧಿಕಾರ ವರ್ತನೆ, ವಿಜ್ಞಾನಾಸಕ್ತಿ ತೋರುವ ಧರ್ಮ. ತುಂಬಾ ವಿಚಾರದಿಂದ ಕೂಡಿದವರಾಗುವರು. ಶೋಧನಾಶಕ್ತಿ ಇದ್ದರೂ ಅದರ ಸದುಪಯೋಗವಾಗುವುದಿಲ್ಲ. ವಿವೇಕವಿದ್ದೂ ಅದನ್ನು ಅನುಸರಿಸುತ್ತಿಲ್ಲ ಇದು ರಾಶಿ ವಿಚಾರದಲ್ಲಿ ಪ್ರಾಚೀನರ ಮತ.

ತಮ್ಮ ದೇಹ ಸುಖಕ್ಕೆ ಅಧಿಕ ಮಹತ್ವವನ್ನು ಕೊಡುತ್ತಿರುವವರು. ದೇಹ ಶ್ರಮದ ಕರ್ತವ್ಯದಿಂದ ಹಿಂದಿರುಗುವರು. ಕಷ್ಟಗಳು ಸಂಭವಿಸಿದರೆ ಓಡಿ ಬಿಡುವರು. ಕೆಲಸವನ್ನು ಬಿಟ್ಟುಬಿಡುವರು. ಎಲ್ಲಾದರೂ ತಿರುಗಿ ಉಂಡು ತಿಂದು, ಬಾಳಿಮೆರೆಯುವ ಜೀವನ ಗೊಳ್ಳುತ್ತಾರೆ.

ವೇದಾಂತ ವಿಚಾರದ ಚರ್ಚೆ ಮಾಡುವುದುಂಟು. ಪ್ರಪಂಚ ಜೀವನದಲ್ಲೂ ಸ್ಥಿರತೆ ಇರುವುದಿಲ್ಲ. ಒಂದೇ ಕಡೆಗೆ ಮನಸ್ಸನ್ನು ಕೊಡವುದಿಲ್ಲ. ದೇವರ ಪೂಜೆ ವಗೈರೆಗಳಲ್ಲಿ ಕೆಲವೊಮ್ಮೆ ಮನಸ್ಸನ್ನು ಕೊಡುವರು. ಜ್ಯೋತಿಷ, ರಾಸಾಯನಿಕಾದಿ ವಿಚಾರಗಳಲ್ಲಿ ಆಸಕ್ತಿ ಇರುವುದು. ವಿಶ್ವಾಸದ ಸ್ವಭಾವವಿರುವುದಿಲ್ಲ. ಚಿಕಿತ್ಸಕರ ಧರ್ಮವನ್ನೇ ತೋರುತ್ತಿರುವರು. ಎಲ್ಲಿ ಅದು ಬೇಕಿದೆಯೆಂಬುದನ್ನು ಕಾಣದೆ ಕಷ್ಟಕ್ಕೊಳಗಾಗುತ್ತಿರುವರು.

ಈ ರಾಶಿಯವರು ಕಾಮ ಪ್ರಧಾನ ಗುಣಗಳು. ಕಾಮವೇ ಇಚ್ಛೆ. ತಮ್ಮ ಇಚ್ಛಾವರ್ತನೆಗೆ ತೊಡಕನ್ನು ತೋರುವ ಸಂಘಟನೆಯಾದಾಗ ವಿರುದ್ಧರಾಗಿ ಕುಟುಂಬ ಮತ್ತು ಅಧಿಕಾರಸ್ಥಾನಗಳಲ್ಲಿ ಚ್ಯುತಿಯನ್ನು ಹೊಂದುತ್ತಾರೆ.

ಗುಣತ್ರಯವಿಭಾಗವನ್ನು ಮಾಡಿ ಫಲವನ್ನು ಈ ರಾಶಿಯವರಿಗೆ ಹೇಳಬೇಕು. ಸತ್ವಗುಣ ಸ್ವಭಾವ, ಶುಭಗ್ರಹರ ಸಂಪರ್ಕದಿಂದ ಈ ರಾಶಿಯವರಿಗಾಗುವುದು. ಸತ್ವಗುಣವುಳ್ಳವರ ಶಾಂತಿಪ್ರಿಯರೂ ವಿನಯಶೀಲರೂ ವಿಷಯಪರಾಙ್ಮುಖರೂ ಆಗುವರು. ದಯಾಳುಗಳು ಎನಿಸುವರು. ಧರ್ಮಾರ್ಥ ಕೆಲಸ ಮಾಡುವ ಬುದ್ಧಿ ಸತ್ವಗುಣಿಗಳಿಗಾಗುವುದು. ಮಿತ್ರರ ಸಂಗ್ರಹವನ್ನು ಇಂತಹರು ಮಾಡುತ್ತಿರುವರು.

ರಜೋಗುಣಗುಣಿಗಳು ಸಾಮಾನ್ಯ ಚಿಕಿತ್ಸಕ ಬುದ್ಧಿಯವರೂ ಅಲ್ಪ ಸ್ವಾರ್ಥಿಗಳೂ, ಸ್ವಾರ್ಥಕ್ಕಾಗಿ ಶ್ರಮಿಸುವವರೂ, ಅನ್ಯರಿಗೆ ಉಪದ್ರವಕೊಡದವರೂ ವ್ಯವಹಾರ ಕುಶಲರೂ ಅನ್ಯರ ಕೆಲಸವನ್ನು ಮಾಡದವರೂ ತುಂಬಾ ಗೆಳೆಯರಿಂದ ಕೂಡಿದವರೂ,ಗೆಳೆಯರು ದೊಡ್ಡ ದೊಡ್ಡ ಮನುಷ್ಯರಿರುವರು.

ಈ ತಮೋಗುಣಿಗಳು ಸುಳ್ಳುಗಾರರೂ ಅತಿ ಚಂಚಲರೂ ವ್ಯಭಿಚಾರಿಗಳೂ ಅವಿಶ್ವಾಸಿಗಳೂ, ಅನ್ಯರಿಗೆ ಉಪದ್ರವವನ್ನು ಕೊಡುವವರೂ ಆಗುವರು. ತಾವು ದೊಡ್ಡ ಮನುಷ್ಯರೆಂಬ ಹೆಮ್ಮೆಯಿಂದ ಕೂಡಿದವರಾಗುತ್ತಾರೆ. ಕಿರಿತನದಿಂದ ಇದ್ದುಕೊಳ್ಳಲು ಬಯಸುವುದಿಲ್ಲ. ಹಿರಿಯರನ್ನು ದ್ರೋಹಿಸಿ, ಬಾಳುವರು. ಈ ದ್ರೋಹವರ್ತನೆಯು ಅವರ ಕಷ್ಟಕ್ಕಾಗುವುದು.

ತಾಮಸಸ್ವಭಾವದ ಜೀವನವಿರುವುದರಿಂದ ಒಳಸಂಚಿನ ಜೀವನ ನಡೆಯುತ್ತಿರುವುದು. ಮಕ್ಕಳಿಂದ ಸುಖಲಾಭ ಕಡಿಮೆ. ವಿವಾಹ ಸಾಮಾನ್ಯ ಕುಟುಂಬದಿಂದ ಆಗುತ್ತದೆ. ಅಧಿಕಾರ ವರ್ತನೆಗೆ ಇಚ್ಛೆಯುಳ್ಳವರಾದ್ದರಿಂದ ತಮ್ಮ ಹಿತಸಾಧನೆಗಾಗಿ ಅನ್ಯ ಪರಿವಾರವನ್ನು ಕಾಡಿಸುತ್ತಿರುವರು. ಅವರನ್ನು ಪೋಷಿಸುತ್ತಲೂ ಇರುವರು. ಎಲ್ಲರೂ ವಿರುದ್ಧಗೊಳ್ಳುತ್ತಾರೆ. ಭೋಗಸಂಪತ್ತಿನ ಕಡೆಗೆ ಲಕ್ಷ್ಯಬಂದಾಗ ಎಲ್ಲರನ್ನೂ ದ್ವೇಷಿಸುವರು. ಕಷ್ಟಗೊಂಡು ಪಲಾಯನವನ್ನು ಮಾಡುವರು. ತಮ್ಮ ತಪ್ಪನ್ನು ಅನ್ಯರ ಮೇಲೆ ಹೊರಿಸುತ್ತಿರುವರು. ಹೆಜ್ಜೆ ಹೆಜ್ಜೆಗೂ ಮಾಡಿದ ತಪ್ಪಿದ ರಿಕಾರ್ಡುಗಳೇ ಇವರಿಂದ ದೊರಕುತ್ತಿದ್ದು ಕೊನೆಗೆ ದಿಕ್ಕು ತೋರದಾಗುವ ಸಂಘಟನೆಗಳೂ ಬರುತ್ತವೆ. ಸ್ವಾರ್ಥದ ಪ್ರೇರಣೆಯಿಂದ ನಡೆದು ಸಂಸಾರ ಜೀವನದಲ್ಲಿ ಕುಟುಂಬದಲ್ಲಿ ಯೋಗ್ಯರಾದ ನಾಯಕರಾಗವುದಿಲ್ಲ. ತಮ್ಮ ಪರಿವಾರದ ಮುಂದೆ ಜಂಭವನ್ನು ತೋರುತ್ತಿರುವ ಪೋಷಿತರನ್ನು ಹಾಳುಗೊಳಿಸುತ್ತಿರುವ ಧೋರಣೆಯೇ ಕಾಣುವುದು.

ತುಲಾ

ತುಲಾರಾಶಿ ಕಾಲಚಕ್ರದ ಏಳನೆಯ ರಾಶಿ. ಇದರ ಒಡೆಯ ಶುಕ್ರ. ಈ ರಾಶಿ ಶನಿಯ ಉಚ್ಚಕ್ಷೇತ್ರ. ರವಿಯ ನೀಚ ಕ್ಷೇತ್ರ. ಈ ರಾಶಿಯ ಪ್ರಭಾವ ಬಸ್ತಿಯ ಮೇಲೆ. ನಾಭಿ ಮತ್ತು ವ್ಯಂಜನಗಳ ನಡುವಿನ ಪ್ರದೇಶ

ಬಸ್ತಿಸ್ಥಾನ. ಇದು ಪುರುಷ ಇದು ಸ್ತ್ರೀ ಎಂಬುದನ್ನು ವ್ಯಂಜಿಸು(ವ್ಯಕ್ತ ಗೊಳಿಸು) ವುದೇ ವ್ಯಂಜನ. ತುಲಾ ಎಂಬ ಶಬ್ದಕ್ಕೆ ಅರ್ಥ ತಕ್ಕಡಿ ಎಂದಾಗಿದೆ. ತಕ್ಕಡಿಯೇ ಈ ರಾಶಿ ಸ್ವರೂಪ. ತಕ್ಕಡಿ ಎಲ್ಲವನ್ನೂ ತೂಗುತ್ತಿರುವುದು ತೂಗಿ ಅಳೆಕೆಗೊಳ್ಳುವ ಶಕ್ತಿ ಈ ರಾಶಿಯವರಿಗಿರುವುದು. ನ್ಯಾಯಾನ್ಯಾಯ ವಿಚಾರ ಸ್ವರೂಪಗಳನ್ನು ಈ ರಾಶಿಯು ಕಂಡುಕೊಳ್ಳುವಂತೆ ಅನ್ಯರು ಕಾಣರು. ತಕ್ಕಡಿಯ ಉಪಯೋಗ ಅನ್ಯರ ಉಪಭೋಗ ಸಾಧನೆಯು ಪರಿವರ್ತನಕ್ಕಾಗಿ, ಅಂತೆಯೇ ಈ ರಾಶಿಯವರು ಕೈಕೊಂಡ ವ್ಯವಹಾರ ಸಂಪರ್ಕಗಳೂ ಸಂಸ್ಥೆಗಳೂ ಹಲವರ ಉಪಭೋಗಕ್ಕೆ ಬೀಳುತ್ತಿದ್ದು ಅವರಿಗೆ ಅದರ ಸುಖಲಾಭವಿರುವುದಿಲ್ಲ.

ತುಲಾರಾಶಿಯವರು ಸಂಸ್ಥೆ ಮೊದಲಾದುವುಗಳನ್ನು ನಿರ್ಮಿಸಿ ಅವು ಅನ್ಯರ ಪಾಲಿಗಾಗುವವು. ಬೇರೆ ಬೇರೆ ಸಂಸ್ಥೆಗಳ ನಿರ್ಮಾಣವು ಈ ರಾಶಿಯವರಿಂದಾಗುತ್ತಿರುವುದು. ಅದು ಉನ್ನತಿಗೆ ಬರುವಾಗ ಅವರು ಅದರಿಂದ ಹೊರಬರುವರು. ಪರಕೀಯರು ಅದರ ಸುಖಾನುಭವ ಪಡೆಯುತ್ತಿರುವರು. ಸಂಸ್ಥೆಗಳ ಪ್ರಗತಿಯನ್ನು ಈ ರಾಶಿಯವರು ಮಾಡುತ್ತಿರುವರಾದರೂ ಅದರಿಂದ ಲಾಭವನ್ನು ಹೊಂದುತ್ತಿಲ್ಲ.

ಕನ್ಯಾ ರಾಶಿಯಲ್ಲಿ ಮಾನವ ಸಮುದಾಯದ ಕೊಡುವ ತೆಗೆದುಕೊಳ್ಳುವ ವ್ಯವಹಾರವು ಆರಂಭಿಸಿತು. ಅದರ ನ್ಯಾಯಾ ನ್ಯಾಯಗಳ ತೀರ್ಪಿನ ಕೋರ್ಟು ಈ ರಾಶಿಯಲ್ಲಾಯಿತು. ಜನತೆ ಕಾನೂನನ್ನು ಕಲಿಯಲಾರಂಭಿಸುವುದರೊಂದಿಗೆ ಅದರ ನಿರ್ಮಾಣಕ್ಕಾರಂಭಿಸಿತು. ವಿಶ್ವವಿದ್ಯಾಲಯದ ನಿರ್ಮಾಣವೇ ಮೊದಲಾದ ಸಾರ್ವಜನಿಕ ಸಂಸ್ಥೆಯ ನಿರ್ಮಾಣ ಈ ರಾಶಿಯವರ ಪಾಲಿಗೆ ಸೇರಿದ್ದು.

ಕಾನೂನಿನ ನಿರ್ಮಾಣ ಗೊಂಡು ಸ್ತ್ರೀ ಪುರುಷ ಸಮಾಜ ಸಂಬಂಧದ ದೃಢಸಂಪರ್ಕವಾಯಿತು. ಈ ರಾಶಿ ಚಕ್ರಕಾಲ ಸ್ತ್ರೀ ಶಿಕ್ಷಣವು ಆರಂಭಿಸಿತು ಸ್ತ್ರೀಯರಿಗೂ ಸಮಸ್ವಾತಂತ್ರ್ಯ ಸಂಬಂಧವನ್ನು ದೃಢಗೊಳಿಸುವ ಉದ್ಯಮವು ತುಲಾರಾಶಿಯವರಿಂದಾಯಿತು. ಶಿಕ್ಷಣರಂಗದಲ್ಲಿ ರಾಜಕೀಯ ಮತ್ತು

ಕಾವ್ಯಕಲಾಸಂಬಂಧ ವೈವಿಧ್ಯವು ಆರಂಭಿಸಿತು. ತುಲಾರಾಶಿಯ ಹಲವು ವೀರವನಿತೆಯರು ಇರುವರು. ಛತ್ರಪತಿ ಶಿವಾಜಿಯ ಮಾತೆ ಜೀಜಾಬಾಯಿ. ಸಕ್ವಾ ಬಾಯಿ, ಸಂಭಾಜಿಯ ಪತ್ನಿ; ತಂಜಾವೂರ ಮಹಾರಾಣಿ ದೀಪಾಬಾಯಿ, ಮಹಾರಾಣಿ ತಾರಾಬಾಯಿ, ಝಾಂಸಿ ರಾಣಿ ಲಕ್ಷ್ಮೀಬಾಯಿ, ಅಹಲ್ಯಾಬಾಯಿ ಹೋಲ್ಕರ್, ಉಮಾಬಾಯಿ ಮತ್ತು ಕರ್ನಾಟಕ ವೀರ ವನಿತೆ ಕಿತ್ತೂರು ಚೆನ್ನಮ್ಮ, ಬಂಗಾಲದ ರಾಣಿ ಭವಾನಿ, ಮೇವಾಡದ ರಾಣಿ ಕರ್ಣಾವತಿ, ದುರ್ಗಾವತಿ, ರಾಣಿ ಕುರಮದೇವಿ, ದೇವಲ ದೇವಿ, ಜವಾಹರದೇವಿ, ಋಗ್ವೇದದ ವಿಶ್ವಕಲಾಲೇಖಾ, ವಿದುಲಾ ಮೊದಲಾದವರ ಈ ರಾಶಿಸಂಬಂಧದವರಿಂದು ಚರಿತ್ರೆಗಳಿಂದ ತಿಳಿದುಬರುವುದು. ಈ ಸ್ತ್ರೀಯರು ರಾಜಕೀಯ ಪ್ರವೀಣೆಯರು. ಸುಲಭಾ, ಮೈತ್ರೇಯಿ, ಗಾರ್ಗಿ ಮೊದಲಾದವರು ವೇದಾಂತ ಪ್ರವೀಣೆಯರಾಗಿದ್ದರು. ಕವಿಯಿತ್ರಿಯರೂ ಈ ರಾಶಿಯ ಸ್ತ್ರೀಯರು ಮಾತ್ರವಲ್ಲ ಪುರುಷರೂ ಮಹಾಪ್ರವೀಣರು ಇರುವರು. ತುಲಾರಾಶಿಯ ರವಿ ಸಂಪರ್ಕ, ಅಥವಾ ಚಂದ್ರ ಸಂಪರ್ಕವುಳ್ಳವರು ಹಲವು ರಾಜಕಾರಣಿಗಳು ಇರುವರು. ಜವಾಹರಲಾಲ ನೆಹರುಗಳ ರವಿ ತುಲೆಯಲ್ಲಿ. ಈ ರಾಶಿ ವಿಚಾರವಲ್ಲಿ ಚರರಾಶಿ. ಉಷ್ಣ, ಆರ್ದ್ರ, ಆರಕ್ತ, ಸಾಂಪತ್ತಿಕರಾಶಿ, ಮನುಷ್ಯರಾಶಿ, ದಿನರಾಶಿ, ಭಾವಾತ್ಮಕರಾಶಿ, ವಾಯು ತತ್ವ, ದ್ವಿಪಾದರಾಶಿ, ನಿರ್ಜಲ, ಭೂಮಿಸ್ಥಲ, ಸಾಧಾರಣ ಪ್ರಸವ, ವಕ್ರೈಶ್ವರಕಾರ, ವಿಷಮರಾಶಿ, ಮಧ್ಯಾಹ್ನ ಪೂರ್ವ ಬಾಧಿರ್ಯ, ದೀರ್ಘದೇಹ ಪುರುಷರಾಶಿ, ಪುರುಷತತ್ವ, ಪಕ್ಷಿಮವಿಕ್ಕು, ರಜೋಗುಣ, ಪಕ್ಷಿರಾಶಿ ಎಂದು ಮೊದಲಾಗಿ ಪೂರ್ವಾಚಾರ್ಯರು ವರ್ಣಿಸಿರುವರು. ವಾಸಸ್ಥಾನ ದೊಡ್ಡ ದೊಡ್ಡ ನಗರ. ನೀಲವರ್ಣ. ವಜ್ರರತ್ನ. ರಾಶಿಯ ಪ್ರಧಾನ ತತ್ವ ಸೌಂದರ್ಯ, ಆತ್ಮಪ್ರಧಾನತತ್ವ, ಆಶ್ರಿತನಸ್ತು ಸಂಪರ್ಕವೃತ್ತಿ, ಶರೀರದೃಶ್ಯ ಸಮಾನತೆ, ಮಾನಸಿಕವೃತ್ತಿ, ಸಮತೋಲನೆ, ರಾಶಿಯ ಗುಣ ಧರ್ಮ ರಾಜನೀತಿಜ್ಞತೆ, ನ್ಯಾಯ ವಿಚಾರಧೋರಣೆಗಳು ಈ ರಾಶಿಯವು.

ತಪಸ್ವಿಗಳಾಗಲಿರುವ ಗುಣಧರ್ಮವಿರುವುದಿಲ್ಲ. ವೇದಾಂತ ಯೋಗಾಭ್ಯಾಸಗಳಿಗೆ ಗುರೂಪದೇಶ ಅಗತ್ಯ. ಈ ರಾಶಿಯವರಿಗೆ ತಾವೇ ವಿಚಾರ

ಮಾತುವ ಶಕ್ತಿ ಮತ್ತು ವಾದವಿವಾದಗೊಳ್ಳುವ ಸ್ವಭಾವವಿದ್ದು ಗುರುವಿನ ವಾತಿನಲ್ಲಿ ವಿಶ್ವಾಸಗೊಳ್ಳುವ ಮನಸ್ಸಿಂಟಾಗುವುದಿಲ್ಲ. ಈ ರಾಶಿಚಕ್ರದ ಮೂರನೆ ಪಾದವಾಗಿದ್ದು ಮೂರನೆ ಕುಟುಂಬರಾಶಿ.

ಮಹಾತ್ಮಾಜಿ ತುಲಾಲಗ್ನದವರು. ಇವರು ಕಾಂಗ್ರೆಸ್ಸಿನ ಸಂಸ್ಥೆಯನ್ನು ಮಾತ್ರವಲ್ಲದೆ ಸ್ತ್ರೀಯರ ಮತ್ತು ಗ್ರಾಮೀಣರ, ಪತಿತರ ಉದ್ಧಾರಕಾಗಿ ಹಲ ವಾರು ಸಂಸ್ಥೆಗಳನ್ನು ನಿರ್ಮಿಸಿದರು. ಹಲವಾರು ಆಶ್ರಮಗಳೂ ಗುಡಿ ಕೈಗಾರಿಕೆಗಳ ಸಂಸ್ಥೆಗಳೂ ಗಾಂಧೀಜಿಯಿಂದ ನಿರ್ಮಿತವಾದವು. ಸಾರ್ವ ಜನಿಕಹಿತಕ್ಕಾಗಿ ಅವು ಸಾರ್ವಜನಿಕಸಂಸ್ಥೆಗಳಾಗಿಯೇ ಇಂದೂ ಇವೆ. ಹರಿ ಜನರ ಉದ್ಧಾರಕ್ಕಾಗಿಯೂ ಮಹಿಳೆಯರ ಉನ್ನತಿಗಾಗಿಯೂ ಮಹಾತ್ಮಾಜಿ ಹಲವು ಸೇವಾಸಂಸ್ಥೆಗಳನ್ನು ನಿರ್ಮಿಸಿದರು. ತುಲಾರಾಶಿಯ ಸಮತೋಲ ನೆಯ ಗುಣಧರ್ಮ ಮಹಾತ್ಮಾಜಿಗಳಲ್ಲಿದ್ದು ಪ್ರಪಂಚವನ್ನೇ ಸಮಾನತೆ ಯಿಂದ ಕಾಣುವ, ಜಾತಿಭೇಧ ಭಾವನೆಯಿರದ ಸಮತ್ವದ, ಕರ್ಮಗಳು ಅವರಿಂದ ನಡೆದುವು. ಪ್ರತಿಯೊಂದು ರಾಷ್ಟ್ರವೂ ಸ್ವಾತಂತ್ರ್ಯದಿಂದಿರ ಬೇಕೆಂದೂ ಉಚ್ಚ ನೀಚಭಾವ ಇರಕೂಡದೆಂದೂ, ಬಿಳಿಯ ಕರಿಯರ ಭೇದವೇ ಮೊದಲಾದುವನ್ನು ತೊಡೆದುಹಾಕುವ ಕರ್ಮವ್ಯವಸಾಯಗಳು ಅವರಿಂದ ನಡೆದು ವಿಶ್ವಬಾಂಧವ್ಯದ ಮತ್ತು ಮಾನವ ಸಮಾಜದ ಸಮಾನ ಸ್ವಾತಂತ್ರ್ಯಘೋರಣೆಯ ರಾಜನೀತಿ ಭಾರತಪಿತನಿಂದ ನಡೆಯಿತು. ಅವರ ರಾಜಕೀಯ ಸೂತ್ರದಿಂದಲೇ ಭಾರತ ಇಂದು ಈ ಘನಸ್ಥಿತಿಗೇರಿದೆ. ಅದನ್ನು ಪರಿಪಾಲಿಸುವ ಧರ್ಮ ಸಮಸ್ತಲೋಕಕ್ಕೆ ಕುಟುಂಬದ್ದು.

ತುಲಾರಾಶಿಯವರಿಗೆ ಹಿಂಸೆಯಾಗದು. ಮಹಾತ್ಮಾಜಿ ಈ ಕಾರಣದಿಂ ದಲೇ ಅಹಿಂಸೆಯ ಪೂಜಾರಿಗಳೂ ಶಾಂತಿದೂತರೂ ಎನಿಸಿದರು. ತ್ಯಾಗವೇ ಈ ರಾಶಿಯವರ ಗುಣಧರ್ಮ. ತುಂಬಾ ತ್ಯಾಗಗಳು ಈ ರಾಶಿ ಅಥವಾ ಲಗ್ನದವರ ಮೂಲಕ ನಡೆಯುತ್ತಿರುವುದು. ಭಾರತದ ಬಾಪೂ ಅಹಿಂಸೆಗಾಗಿ ಆ ಮರಣಾಂತ ಉಪವಾಸವನ್ನು ಹಿಡಿಯುವ ದೇಹಕ್ಕೆ ಕಷ್ಟವನ್ನು ಕೊಡುವ ವ್ರತವನ್ನು ಕೈಗೊಂಡಿರುವರು. ಅಂತೆಯೇ ಈ ರಾಶಿಯವರು ತಾವು ಕಷ್ಟ ವನ್ನು ಕೊಡರು.

ಸತ್ವಗುಣ ತುಂಬಿದ ಈ ರಾಶಿಯವರು ಪರೋಪಕಾರಿಗಳೂ ನಿಷ್ಠೆಯು ಚಿತ್ತರೂ, ಹಟವ್ಯಕ್ತಿಯವರೂ, ಸಚ್ಛೀಲರೂ, ಮೃದು ಸ್ವಭಾವಿಗಳೂ, ದಯಾಳುಗಳೂ, ಪ್ರಗಲ್ಭ ಬುದ್ಧಿಶಕ್ತಿಯುಕ್ತರೂ, ನಿಸ್ವಾರ್ಥಿಗಳೂ ಜನತೆಯಲ್ಲಿ ಪ್ರೇಮದಿಂದಿದ್ದುಕೊಳ್ಳುವವರೂ, ಅನ್ಯರಿಗಾಗಿ ಕಷ್ಟವನ್ನು ಅನುಭವಿಸುವವರೂ ಆಗುತ್ತಾರೆ.

ರಜೋಗುಣಿಗಳು ಅಲ್ಪಸ್ವಾರ್ಥಿಗಳು ಸ್ವಶರೀರದ ಸುಖದ ಕಡೆಗೆ ಗಮನಕೊಡುವವರೂ, ಹೆಂಡತಿ ಮಕ್ಕಳಗೊಡವೆಗೊಳ್ಳದವರೂ ಆಗುವರು. ಜನತೆಯಲ್ಲಿ ಗೆಳೆತನವನ್ನು ತೋರುವವರಾದರೂ ಸಹಾಯಕ್ಕೆ ಬೀಳರು, ದುರಾಗ್ರಹ ಅಲ್ಪ ಮಾತ್ರವಿದ್ದು ಅಭಿಮಾನಿಗಳೂ, ಶೂರರೂ ಗೌರವಯುಕ್ತರೂ ತ್ಯಾಗಿಗಳೂ ಆಗುವರು.

ರಜೋಗುಣದವರಲ್ಲಿ ಅವಿಶ್ವಾಸ ಹೆಮ್ಮೆ, ಸ್ವಾರ್ಥ, ವಿತಂಡವಾದ, ಅನ್ಯರಿಗೆ ಉಪದ್ರವಿಸುವಿಕೆ, ತಾವು ಸರ್ವಜ್ಞರೆಂಬ ಭಾವನೆ ಮೊದಲಾದುವುಗಳಿರುತ್ತವೆ.

ತುಲಾಲಗ್ನ ಅಥವಾ ರಾಶಿಯನ್ನು ಕಂಡಾಗ ಅವರಲ್ಲಿ ಯಾವ ಗುಣ ಅತಿ ಗಾತ್ರವಾಗಿರುವುದೆಂಬುದನ್ನು ಅಲ್ಲಿ ಸೇರಿದ ಮತ್ತು ನೋಡುತ್ತಿರುವ ಗ್ರಹಗಳ ಮೂಲಕ ನಿರ್ಣಯಿಸಬೇಕಿದೆ. ಶುಕ್ರ ಗುರುಗಳು ಸತ್ವಗುಣದವರು, ಚಂದ್ರನು ರಜೋಗುಣದವನಾದರೂ ಅವನ ಬಲಾಬಲ ಮತ್ತು ಅವನನ್ನು ಸೇರಿದ ಗ್ರಹರನ್ನು ತಿಳಿಯದೆ ಫಲವನ್ನು ಹೇಳಕೂಡದು. ರಾಹು, ಶನಿಗಳು ತಮೋಗುಣಿಗಳು. ಬುಧ ಮಿಶ್ರಗುಣದವ ಅವನು ಸೇರಿದ ಗ್ರಹರ ಪರಿಣಾಮ ಅವನಿಗುಂಟಾಗುತ್ತದೆ. ವರಾಹನು ಗ್ರಹಗಳ ತ್ರಿಗುಣವಿಚಾರವನ್ನು ವರ್ಣವಿಚಾರದೊಂದಿಗೆ ತಿಳಿಸಿರುವನು.

## ವೃಶ್ಚಿಕ

ವೃಶ್ಚಿಕಪದದ ಅರ್ಥ ಚೇಳು ಎಂದಾಗಿದೆ. ಚೇಳೇ ಈ ರಾಶಿ ಸ್ವರೂಪ. ಇದು ಕಾಲದ ತೃತೀಯ ಕುಟುಂಬರಾಶಿ. ಈ ರಾಶಿ, ರಾಶಿಚಕ್ರದಲ್ಲಿ ಎಂಟನೇ ರಾಶಿ. ಈ ರಾಶಿಯವರಲ್ಲಿ ಯುದ್ಧನಾಡುವ, ಅನ್ಯರ ಮೇಲೆ

ತನ್ನ ಅಧಿಕಾರಧೋರಣೆಯನ್ನು ತೋರುವ ಪ್ರಭಾವವಿದೆ. ರಾಸಾಯನಿಕ ಶಾಸ್ತ್ರದ ಪ್ರಗತಿ ಈ ರಾಶಿಯ ಕಾಲದಲ್ಲಾಯಿತು. ವೃಶ್ಚಿಕದಲ್ಲಿ ರವಿ ಚಂದ್ರ ಕುಜರ ಸಂಪರ್ಕವಿದ್ದರೆ ವೈದ್ಯಕೀಯ ಶಾಸ್ತ್ರಾಭ್ಯಾಸ ಉತ್ತಮವಾಗುತ್ತದೆ. ಉತ್ತಮ ಡಾಕ್ಟರರು ಈ ರಾಶಿಯವರಿರುವರು. ಈ ರಾಶಿಯಲ್ಲಿ ರವಿ ಇರುವವರು ಉತ್ತಮ ಚಿಕಿತ್ಸಕರಾಗುತ್ತಾರೆ.

ಶಾರೀರಿಕ ಸಂಬಂಧದ ಶಾಸ್ತ್ರದ ವಿಚಾರ ಈ ರಾಶಿಯಲ್ಲಾಯಿತು. ಔಷಧ ವಿಚಾರದಲ್ಲಿ ಅನುಸಂಧಾನ ಮತ್ತು ಪ್ರಯೋಗಗಳು ವೃಶ್ಚಿಕ ರಾಶಿಗೆ ಸೇರಿದುವು. ಮದ್ದಿನ ವಿಚಾರದಲ್ಲಿ ಸೂಜಿಯ ಚುಚ್ಚುವಿಕೆ (ಇಂಜಕ್ಷನ್) ಇಂದು ಕಂಡುಬರುವುದಾದರೂ ಪ್ರಾಚೀನಕಾಲದ ವೈದ್ಯರು ಇದರ ಅನುಸಂಧಾನಗೊಂಡಿರುವರೆಂಬುದನ್ನು ವೈದ್ಯಕೀಯ ಗ್ರಂಥಗಳಿಂದ ತಿಳಿಯುವೆವು. ದೈವೀ, ಆಸುರೀ, ಮಾನುಷೀ, ಎಂಬ ಮೂರು ಚಿಕಿತ್ಸೆಗಳಿವೆಯೆಂದೂ, ಅವುಗಳಲ್ಲಿ ಆಸುರೀ ಚಿಕಿತ್ಸೆ ಶಸ್ತ್ರ ಸಂಬಂಧವಾದುದೆಂದೂ ವೈದ್ಯ ಗ್ರಂಥಗಳಲ್ಲಿ ಹೇಳಲಾಗಿದೆ.

ವೃಶ್ಚಿಕ ರಾಶಿಯ ಸಂಪರ್ಕಗೊಂಡವರಿಗೆ ಕುಟುಂಬದ ನೋಡುವಿಕೆಯ ಮೂಲಕ ತುಂಬಾ ಕಷ್ಟಪರಂಪರೆಗಳು ಬರುವವು. ಈ ಮೂಲಕ ತುಂಬಾ ಅಶಾಂತಿಯೂ ಉಂಟಾಗುತ್ತಿರುವುದು. ಅನೇಕ ವಿಪತ್ಪರಂಪರೆಗಳನ್ನು ಎದುರಿಸಲೂ ಬೇಕಾಗುವುದು. ಈ ಕಾರಣದಿಂದ ಶಾಂತಿಯುಂಟಾಗದೆ ವೈರಾಗ್ಯಭಾವನೆಯು ಮೊಳೆತು ಕುಟುಂಬೀಯರಿಂದ ದೂರವಾಗಿರಬೇಕಾಗುವುದು. ಇದು ವೃಶ್ಚಿಕರಾಶಿಯವರಿಗೆ ಉಂಟಾಗುವ ಕೌಟುಂಬಿಕ ಪರಿಸ್ಥಿತಿ. ಗುದ ಮತ್ತು ಲಿಂಗದ ಸ್ಥಾನ ಈ ರಾಶಿಗೆ.

ವೃಶ್ಚಿಕ ಚೇಳು. ಚೇಳಿಗೆ ಬಾಲದಲ್ಲಿ ವಿಷ. ಅದು ಬಾಲದ ಮೂಲಕ ಚುಚ್ಚುತ್ತಿರುವುದು. ಎಂತಹ ಮಹಾಸರ್ಪವನ್ನೂ ಚೇಳು ಎದುರಿಸಬಲ್ಲುದು. ಚೇಳುಗಳು ವಿಷಸರ್ಪಗಳ ತತ್ತಿಯನ್ನು ನಾಶಗೊಳಿಸುವ ಜಂತುಗಳು. ಮಹಾ ತಾಂತ್ರಿಕಜೀವನದ ನೆಲೆ ಚೇಳಿನದು. ಅದು ಮಣ್ಣಿನ ಒಳಗೇ ಇದ್ದು ಹೊರಗೆ ಅಪರೂಪವಾಗಿ ಕಾಣಿಸುವುದು. ಬಿಲ, ಸಂದಿನ ಸ್ಥಳ ಮತ್ತು ಬಿರುಕುಗಳಲ್ಲಿ ಇದ್ದುಕೊಳ್ಳುತ್ತದೆ. ಈ ರಾಶಿಯವರು ಚೇಳು

ಸರ್ಪವನ್ನು ಎದುರಿಸುವಂತೆ ಎಂತಹವರನ್ನೂ ತಾಂತ್ರಿಕ ನೆಲೆಯಿಂದ ಎದುರಿಸಿ ಹತೋಟಿಗೆ ತಂದುಬಿಡುವರು. ಎದುರಿಗೆ ಯಾವ ಕೆಲಸಕ್ಕೂ ಕಾಣದೆ ಹಿಂದಿನಿಂದಿದ್ದು ಕೆಲಸವನ್ನು ಸಾಧಿಸಿಬಿಡುವರು. ತಾಂತ್ರಿಕ ಪ್ರಯೋಗ ಅಧಿಕ. ಮದ್ದುರೋಗಕ್ಕೆ ಅಗತ್ಯ. ಅಂತೆಯೇ ರಾಜಕೀಯ ಜೀವನದಲ್ಲಿ ಹಲವು ಬಗೆಯ ರೋಗಜೀವನದವರಿರುವರು. ಅವರಿಗೆ ಬೇಕಾದ ಚಿಕಿತ್ಸೆಗೊಳ್ಳುವ ಯೋಜನೆ ಈ ರಾಶಿಯವರ ಪಾಲಿಗೆ ಸೇರುತ್ತದೆ. ಯಾವ ಕೆಲಸವನ್ನೂ ಪ್ರತ್ಯಕ್ಷತಃ ಮಾಡದೆ ಅಪರೋಕ್ಷದಲ್ಲಿ ಪ್ರತಿಕ್ರಿಯೆಗೊಳ್ಳುವ ಸ್ವಭಾವ ಈ ರಾಶಿಯವರಿಗಿರುತ್ತದೆ.

ವೃಶ್ಚಿಕದ ಒಡೆಯ ಕುಜ. ಕುಜ ಯುದ್ಧದ ದೇವತೆ. ಕುಜನು ಯುದ್ಧ ದೇವತೆಯಾದ್ದರಿಂದ ಈ ರಾಶಿಯವರು ಯಾವ ಕಾರ್ಯರಂಗವನ್ನು ಪ್ರವೇಶಿಸುವರೋ ಅಲ್ಲಿ ಯುದ್ಧರಂಗ ಸಂಭವಿಸುತ್ತದೆ. ಅದಕ್ಕೆ ಈ ರಾಶಿಯವರು ಮೂಲಭೂತರಾಗುವುದಿಲ್ಲ. ಅನ್ಯರು ಕಾರಣರಾಗಿರುತ್ತಿದ್ದು ಯುದ್ಧದ ಕಾರ್ಯಭಾರ-ಕೌಟುಂಬಿಕ ಜೀವನದ ಸಂಗ್ರಾಮವೇ ಮೊದಲಾದುವು ನಡೆಯುತ್ತಲೇ ಇರುವವು. ರಾಜಕೀಯ ರಂಗದಲ್ಲಿ ಇರುವ ಈ ರಾಶಿಯವರು ಚಿಕಿತ್ಸಾಧೋರಣೆಯವರಿದ್ದು, ಯಾರು ಯಾರಲ್ಲಿ ಯಾವ ಯಾವ ಬಗೆಯ ಮಾನಸಿಕ ರೋಗಗಳಿವೆಯೆಂಬುದನ್ನು ಕಂಡು ಆ ಮೂಲಕ ತಮ್ಮ ಕಾರ್ಯಸಾಧನೆಯ ಚಿಕಿತ್ಸಾಯೋಜನೆ ಗೊಳ್ಳುವರು.

ವೃಶ್ಚಿಕರಾಶಿಯ ವಿಚಾರದಲ್ಲಿ ಪ್ರಾಚೀನರು ಸ್ಥಿರರಾಶಿ ಮತ್ತು ಕೀಟರಾಶಿಯೆಂದೂ ಹೇಳಿರುವರು. ಅದೂ ಅಲ್ಲದೆ ಇದು ರಾತ್ರಿ ರಾಶಿ, ಕಫಾತ್ಮಕ ಪ್ರಕೃತಿ, ವಿಷರಾಶಿ, ಜಲತತ್ತ್ವ ಬಹುಪ್ರಸವ ಮೂಕರಾಶಿ, ಸಮರಾಶಿ, ದಿನದ ಪ್ರಥಮ ಭಾಗದಲ್ಲಿ ಬಾಧಿರ್ಯವೃಕ್ಷದೆಂದೂ ದೀರ್ಘದೇಹ, ಸ್ತ್ರೀರಾಶಿ, ಉತ್ತರದಿಕ್ಕು, ತಾಮಸಗುಣ, ಎಂದೂ ಹೇಳಿರುವರು. ಬಿಲ, ಕಲ್ಲುಗಳ ಅಡಿ, ಮನೆಗಳ ಮೂಲೆ ನಿವಾಸಸ್ಥಾನ, ರಾಶಿಯ ಪ್ರಧಾನ ಗುಣಧರ್ಮ ನ್ಯಾಯವಾದಿತೆ. ಹೃದಯ ವಿಚಾರ ಅಧಿಕಾರಸತ್ತೆಯದು. ಸಿಟ್ಟಿನಿಂದ ಉರಿಯುವುದು ಶಾರೀರಿಕ ದೃಶ್ಯ, ಮಾನಸಿಕ ದೃಶ್ಯ ನಿಶ್ಚಯ ಮತ್ತು ನಿಗ್ರಹ. ಮೂಲಸ್ವಭಾವ ಕಷ್ಟ ಸಹಿಸುವಿಕೆ, ಮತ್ತು ಹಟ, ನಿಗ್ರಹ, ಈ

ರಾಶಿಯವರಿಗೆ ಪರೀಕ್ಷಕ ಮತ್ತು ರಾಜ್ಯಪಾಲರ ನೆಲೆ ತೋರುವುದು.

ಕಷ್ಟಗಳನ್ನು ಅನುಭವಿಸುವುದೇ ಈ ರಾಶಿಯವರಿಗೆ ಜೀವನದಲ್ಲಿ ಸೇರಿರುವ ಪಾಲು. ಶಾಂತಿಗಾಗಿ ಪೂರವಿದ್ದು ಕೊಳ್ಳುವರು. ಹಟಸಾಧನೆಗೊಳ್ಳುತ್ತಿರುವರು. ಹೀಗಿದ್ದರೂ ಜೀವನದಲ್ಲಿ ಶಾಂತಿಗೊಳ್ಳುವುದಿಲ್ಲ. ಜೀವನದಲ್ಲಿ ಹಟಯೋಗದಿಂದ ಆತ್ಮಜ್ಞಾನವಾಗುವುದಿಲ್ಲ. ಆತ್ಮಜ್ಞಾನವಾಗದೆ ಶಾಂತಿಯು ಪ್ರಾಪ್ತಿ ಇಲ್ಲ. ಆಸನ ಪ್ರಾಣಾಯಾಮ ಮೊದಲಾದುವುಗಳನ್ನು ಮಾಡುವರು. ದೇವರ ಭಕ್ತಿಯನ್ನೂ ಪಾರಾಯಣ, ಮಂತ್ರ, ಜಪಾದಿಗಳನ್ನು ಒಮ್ಮೆ ಕೈಕೊಂಡು ಅದನ್ನು ಅರ್ಧದಲ್ಲಿಯೇ ಬಿಡುತ್ತಿರುವರು. ಯತ್ನ ಕಡಮೆಯಾಗುವುದು. ಮಾನವ ಕೋಟಿಯಲ್ಲಿ ಆತ್ಮಜ್ಞಾನ ಸಿದ್ಧಿಗಾಗಿ ಕೆಲವರೇ ಯತ್ನಿಸುತ್ತಿರುವರು. ಸಿದ್ಧಿಗಾಗಿ ಯತ್ನಿಸುವ ಕೆಲವರಲ್ಲಿ ಆತ್ಮಜ್ಞಾನವನ್ನು ಪಡೆಯುವವರು ವಿರಳ.

ಈ ರಾಶಿಯ ಯೋಗಿಗಳು ಗಡ್ಡವನ್ನು ಬೆಳೆಯಿಸಿ ಭಸ್ಮ ಅಥವಾ ಮುದ್ರಾಧಾರಣೆಗೊಂಡು ಧ್ಯಾನಕ್ಕೆ ಕುಳಿತುಬಿಡುವರು. ಆತ್ಮಜ್ಞಾನ ಸಿದ್ಧಿಯನ್ನು ಹೊಂದುವುದಿಲ್ಲ! ಮಂತ್ರಜ್ಞಾನವುಳ್ಳವರೆಂದು ತೋರ್ಪಡಿಸುವ ಗುಣವಿದೆ. ಈ ತೋರ್ಪಡೆಯು ನೈಜವಾಗಿರುವುದಿಲ್ಲ. ಸ್ವಾರ್ಥ ಸಾಧನೋದ್ದೇಶವಾಗಿರುತ್ತದೆ. ಸ್ವಾರ್ಥ ಸಾಧನೆಯು ಈ ರಾಶಿಯವರ ಪಾಲಿಗೆ ಸೇರಿರುವುದರಿಂದ ಜೀವನದಲ್ಲಿ ಯಶಸ್ವಿಗಳಾಗುವುದಿಲ್ಲ. ಜೀವನದಲ್ಲಿ ಯಶಸ್ಸನ್ನು ಪಡೆಯಲು ಸ್ವಾರ್ಥತ್ಯಾಗ ಬೇಕಿದೆ. ತ್ಯಾಗದಿಂದಲೇ ಹೊಣೆಗಾರಿಕೆಯ ಸ್ಥಾನ ದೊರಕುವುದು. ಜೀವನರಂಗದಲ್ಲಿ ಸ್ವಾರ್ಥ ಸಾಧನೆಯುಳ್ಳ ವರ್ತನೆ ಈ ರಾಶಿಯವರಿಗೆ ಕಂಡುಬರುವುದರಿಂದ ಅವಹೇಳನೆಗೆ ಪಾತ್ರರಾಗುವರು. ಈ ಸ್ವಾರ್ಥವು ಪಕ್ಷಜಾತಿ ಪರವಾಗಿ ಹಲವರಲ್ಲಿ ಉಂಟಾಗುವುದಿದ್ದು ಅನ್ಯ ಪಕ್ಷ ಜಾತಿ ಪಂಗಡದವರಿಂದ ಅವಹೇಳನೆಯುಂಟಾಗುತ್ತದೆ.

ವೃಶ್ಚಿಕ ರಾಶಿಯವರಲ್ಲಿ ಸತ್ವಗುಣಯುಕ್ತರು ಪರೋಪಕಾರಿಗಳೂ ದಯಾಳುಗಳೂ, ಪ್ರೇಮವರ್ತನೆ, ಪ್ರತಿಯೊಂದನ್ನೂ ವಿಚಾರಿಸಿ ನೋಡಿಕೊಳ್ಳುವ ಕ್ರಮ, ತಮ್ಮ ವಿಚಾರವನ್ನು ನಿರ್ಭಯವಾಗಿ ಪ್ರಕಟಿಸುವ

ಧೋರಣೆಗಳಿಂದ ಕೂಡಿದವರಾಗುವರು. ತಮ್ಮ ಜೀವನ ಅನ್ಯರ ಹಿತಕ್ಕಾಗಿ ಸಾಗುವುದು.

ರಜೋಗುಣಿಗಳೂ, ಪರಾಕ್ರಮಿಗಳೂ, ನಿರ್ಭಯರೂ, ದುರಾಗ್ರಹಿಗಳೂ ವಿತಂಡವಾದಿಗಳೂ, ದಯಾಪ್ರೇಮುಗಳಿಂದ ಕೂಡಿ ಬಡವರಿಗೆ ಉಪಕಾರವನ್ನು ಮಾಡುವವರೂ ಆಗುವರು. ಗೆಳೆಯರ ಸಮೂಹ ಮಹಾ ಪುರುಷರವ್ಯಾಗುವುದು. ದೊಡ್ಡ ಸರ್ಜನರಾಗುವುದೂ ಇದೆ.

ತಮೋಗುಣಿಗಳು ದುರಾಗ್ರಹಿಗಳೂ, ವಿತಥಾಷಿಗಳೂ, ಅಹಂಭಾವಿಗಳೂ, ಕೃತಘ್ನರೂ, ಕ್ರೋಧಿಗಳೂ, ಧೂರ್ತರೂ ಕಪಟಿಗಳೂ ಆಗುವರು. ಅನ್ಯರಿಗ ಉಪಕಾರವಮಾಡುವುದಿಲ್ಲ. ಮನಸ್ಸಿನಲ್ಲಿ ಸಿಟ್ಟಿರಿಸಿ ಸಮಯವನ್ನು ಕಾದು ಸೇಡಿಗೆ ಸೇಡನ್ನು ತೀರಿಸಿ ಬಿಡುವರು.

ವೃಶ್ಚಿಕ ರಾಶಿಗೆ ಧನ ಸಂಸ್ಥೆಯು ಸಂಪರ್ಕವಿದೆ. ಧನರಾಶಿಯಲ್ಲಿ ಚೇಳಿರುವುದೆಂದು ಶೋಧಕರ ಮತ. ಅಧಿಕಾರ ಸಂಪತ್ತಿನ ಧೋರಣೆಗೆ ಧನವೇ ಮುಖ್ಯ, ಧನದ ಮೂಲಕವೇ ಲೌಕಿಕದಲ್ಲಿ ಜೀವನದ ನೆಲೆ ಇರುತ್ತಿರುವುದು. ಜೀವನರಂಗದಲ್ಲಿ ಧನದ ಶಿಖರವನ್ನೇರಿ ಸುಖ ಭೋಗ, ಅಧಿಕಾರಭೋಗವೇ ಮೊದಲಾದವುಗಳುಂಟಾಗುತ್ತವೆ. ನಾಣ್ಯಕ್ಕೆ ಇಬ್ಬದಿಯಲ್ಲಿ ಸ್ವರೂಪಭೇದವಿದೆ. ನಾಣ್ಯ ಒಂದೇ ಆದರೂ ಅದರ ಎರಡು ಭಾಗಗಳೂ ಒಂದೇ ಸ್ವರೂಪದ್ದವಲ್ಲ. ಅಂತೆಯೇ ಈ ರಾಶಿಯು ಅಂತರಂಗ ಬಹಿರಂಗ ರೂಪ ವಿಭಿನ್ನವಾಗಿ ಕಾಣಬರುತ್ತಿದೆ.

## ಧನು

ಧನು ಎಂಬ ಪದ ಸಂಸ್ಕೃತ. ಬಿಲ್ಲು ಎಂಬು ಈ ಶಬ್ದಾರ್ಥ. ಧನು ರಾಶಿಯನ್ನೇ ಕೋದಂಡವೆಂದು ಕರೆಯುತ್ತಿರುವರು. ಧನು ಎಂಬ ಶಬ್ದದ ಪರ್ಯಾಯ ಶಬ್ದ ಕೋದಂಡವಾಗಿದೆ. ಧನುಸ್ಸಿನ ಉಪಯೋಗವಾವುದಕ್ಕೆ ಎಂಬುದನ್ನು ಎಲ್ಲರೂ ಬಲ್ಲರು. ಬಿಲ್ಲನ್ನು ಹಿಡಿದ ಮನುಷ್ಯನಿಗೆ ಕುದುರೆಯ ಜಘನ (ಹಿಂಬದಿ-ಪುಕ್ಕಳಿ) ಇರುವುದು. ಈ ರಾಶಿ ಸ್ವರೂಪ. ಧನು ರಾಶಿ ಕಾಲಚಕ್ರದ ಒಂಭತ್ತನೇಯ ರಾಶಿ. ಈ ರಾಶಿಯ ಅಧಿಪ

ಗುರು. ಗುರುವಿಗೆ ಮೂಲತ್ರಿಕೋಣ ರಾಶಿಯು ಧನುವೇ ಆಗಿರುವುದು.

ಧನುವಿನ ಅರ್ಧಭಾಗ ಮೃಗಸ್ವರೂಪ, ಅರ್ಧಸ್ವರೂಪ ಮನುಷ್ಯ ರೂಪ. ಊರ್ಧ್ವಾಂಗ ಮನುಷ್ಯ ರೂಪದಲ್ಲಿದ್ದು ಕೈಯಲ್ಲಿ ಬಿಲ್ಲನ್ನು ಕಾಣು ವವು. ಇದರಿಂದ ಈ ರಾಶಿಯು ಮನುಷ್ಯರಲ್ಲಿ ಮೃಗೀಯತೆ ಮತ್ತು ಮನು ಷ್ಯತೆಗಳ ಸಮನ್ವಯವಿದೆ. ಹಿಂಸೆ, ಅನ್ಯಾಯ ವೃತ್ತಿ, ಪಶುವೃತ್ತಿಗಳನ್ನು ತೋರುವ ಧೋರಣೆಯನ್ನೂ ಇದರಿಂದ ಕೆಲವರಲ್ಲಿ ಕಾಣಬಹುದು. ಅಲ್ಲದೆ ಮಾನವೀಯತೆಯ ಗುಣಾಂಶಗಳೂ ಕಂಡುಬರುವವು. ಬಿಲ್ಲು ಸೈನಿಕನದು. ಸೈನಿಕನು ಯುದ್ಧಕಾಲದಲ್ಲಿ ನ್ಯಾಯಾನ್ಯಾಯಗಳನ್ನು ನೋಡನು. ಶಿಶುವಿನ ಮೇಲೂ ಆಯುಧವನ್ನು ಪ್ರಯೋಗಿಸಿಬಿಡುವನು. ಅಂತೆಯೇ ಈ ರಾಶಿಯು ವರು ವಿರೋಧ ಭಾವನೆಗೊಂಡಾಗ ಯಾವ ವಿವೇಚನೆಯನ್ನೂ ಹೊಂದುವು ದಿಲ್ಲ. ಸ್ವಾರ್ಥ ಪ್ರವೃತ್ತಿಯಿಂದ ಅಂಧರಾಗಿ ಅನ್ಯರಲ್ಲಿ ಹೊರಿಸುವ ಆರೋ ಪಗಳು ಅತಿಯಾಗಿದ್ದು ಅನ್ಯಾಯದವುಗಳಾಗಿಯೇ ಕಂಡುಬರುವವು.ಮಾತ್ರ ವಲ್ಲದೆ ನ್ಯಾಯ ಧೋರಣೆ ತಮ್ಮದೆಂದು ಶಾಸನಾತ್ಮಕ ನುಡಿಗಳಿಂದ ಮತ್ತು ವರ್ತನೆಯಿಂದ ತೋರುತ್ತಿರುವರೆಂದು ಹೇಳುವರಲ್ಲದೆ ಆ ವರ್ತನೆ ಅವರಲ್ಲಿ ರುವುದಿಲ್ಲ. ಶಾಸನ, ಅಧಿಕಾರ, ಭೋಗಲಾಲಸೆಗಳಲ್ಲಿ ಸೈನಿಕನು ಸದಾ ಪೋಷಕನಾಗಿರುವನು. ಪರರ ಉಪಭೋಗ ಸಂಪತ್ತನ್ನು ಹೊಂದಿ ಬಾಳು ತ್ತಿರುವನು. ಆತನಿಗೆ ಅಧಿಕಾರಧೋರಣೆ ಶಾಸನ ಧೋರಣೆಗಳು ಜೀವನ ದಲ್ಲಿರುವವಾದರೂ ಕುಟುಂಬದ ಶಾಸನಧೋರಣೆ ಅಧಿಕಾರ ಪ್ರಾಪ್ತಿ ಧೋರಣೆಗೆ ಈ ರಾಶಿಯುವರು ಆಶಿಸುತ್ತಲೇ ಇದ್ದು ಅದಕ್ಕಾಗಿ ಒಂದಲ್ಲ ಒಂದು ದಾರಿಯನ್ನು ಹಿಡಿಯುತ್ತಲೇ ಇರುವರು. ಕುಟುಂಬ ಜೀವನದಲ್ಲಿ ಧನುರಾಶಿಯುವರಿಗೆ ಅಧಿಕಾರಸ್ಥಾನ ಪ್ರಾಪ್ತಿಯು ಇಚ್ಛೆಯೇ ಇದ್ದಿರುವುದು.

ಯುದ್ಧಕಾಲದಲ್ಲಿ ಬಿಲ್ಲಿನ ಉಪಯೋಗ. ಹಿಂಸೆಗಾಗಿಯೇ ಬಿಲ್ಲಿರು ವುದು. ಜೀವನ ರಂಗದಲ್ಲಿ ಹಿಂಸೆ ರಕ್ತಪಾತದಿಂದ ಮಾತ್ರವೆಂದು ತಿಳಿಯ ಕೂಡದು. ಮನಸ್ಸನ್ನು ನೋಯಿಸುವಿಕೆ, ಅಪವಾದದ ಆರೋಪಣೆ, ಅನ್ಯಾಯಕರ್ಮಗಳೂ ಜೀವನರಂಗದಲ್ಲಿ ಅಪರೋಕ್ಷ ಹಿಂಸೆಗಳು. ಅಪ ರೋಕ್ಷ ಹಿಂಸೆಯೇ ಧನುರಾಶಿಯುವರಿಂದ ನಡೆಯುವುದೆಂದು ಕೆಲವರ ಮತ.

ದೈಹಿಕ ಮಾನಸಿಕ ಹಿಂಸೆಗಳೆರಡೂ ಈ ರಾಶಿಯವರಿಂದ ಸಾಧ್ಯ. ಗುಪ್ತವಾಗಿದ್ದು ಶಿಕಾರಿಯು ಮೃಗಗಳನ್ನು ಹೊಡೆಯುವನು. ಗುಪ್ತರಂಗದ ಜೀವನವನ್ನು ತೋರಿ ತಾಂತ್ರಿಕ ಹಿಂಸೆ ಈ ರಾಶಿಯವರಿಂದ ಸಂಭವಿಸುವಂತಿದೆ.

ಕುದುರೆ ನಿರ್ಭಯ ಜೀವಿ. ಕುದುರೆಯು ಸುಖ, ಶಾಂತಿ, ಯುದ್ಧ ಕಾಲಗಳಲ್ಲಿ ಒದಗುವ ಪ್ರಾಣಿ. ಅಂತೆಯೇ ಈ ರಾಶಿಯವರು. ಸುಖ, ಶಾಂತಿ, ಯುದ್ಧಕಾಲಗಳಲ್ಲಿ ಮುಂದಾಗಿ ನಿಂತಿರುವರು. ಪ್ರತಿಯೊಂದು ಕಾಲದಲ್ಲೂ ಕುದುರೆ ಉಪಯೋಗಕ್ಕೆ ಬೀಳುತ್ತಿದ್ದು ಅನ್ಯರ ಸುಖತಂತ್ರಗಳಿಗೆ ಉಪಕರಣವಾಗುವುದು, ಅದರಿಂದಲೇ ಈ ರಾಶಿಯವರು ಪೋಷಕತ್ವ ಸಂಬಂಧಗೊಂಡು ಜಗಳ ಮೊದಲಾದುವುಗಳಿಗೆ ಅಂಗವಾಗಿ ಪರಿಣಮಿಸುವರು. ಪ್ರಧಾನಾಂಗವು ಇದರಿಂದಲೇ ಉಂಟಾಗುತ್ತಿದ್ದು ಅದನ್ನೇ ಬಯಸುತ್ತಿರುವರು. ನ್ಯಾಯಾ ನ್ಯಾಯಾದಿಗಳಲ್ಲಿ ಪ್ರವೇಶಿಸಿ ಅದರ ಸುಖ ದುಃಖಾನುಭವ ಎರಡನ್ನೂ ಈ ರಾಶಿಯವರಿಗೆ ಹೊಂದಬೇಕಾಗುತ್ತದೆ. ಜಗಳಗೊಂಡು ಅದರಿಂದ ನೇದನೆಯನ್ನು ಹೊಂದಲೂ ಬೇಕಾಗುವುದು. ಪಕ್ಷಪಾತ ಧೋರಣೆ ಈ ರಾಶಿಯವರಿಗೆ ಪ್ರಧಾನ. ತಮಗೆ ಯಾರು ಉಣ್ಣಲು ತಿನ್ನಲು ಮೊದಲಾದುವುಗಳಿಗೆ ಕೊಡುವರೋ ಅವರ ಭಾಗಗೊಂಡು ನಿಂತು, ಪಕ್ಷಪಾತಿತ್ವ ಕಾಣುವುದು. ಈ ರಾಶಿಯವರಲ್ಲಿ ಶಿಕ್ಷಿತರನ್ನೂ ಅಶಿಕ್ಷಿತರನ್ನೂ ವಿಂಗಡಿಸಿ, ಶಿಕ್ಷಿತರು ಸದಾ ಒಂದಲ್ಲ ಒಂದು ಕಲಹಮಯ ಜೀವನ ಉಳ್ಳವರಾಗುವರೆಂದೂ, ಅಶಿಕ್ಷಿತರು ಅನ್ಯರ ಕಲಹೋಪಯೋಗಿ ಸೈನಿಕರಾಗುವರೆಂದೂ ತಿಳಿಯುವುದು ಒಳ್ಳಿತು. ಕುಟುಂಬ ಜೀವನದಲ್ಲಿ, ಒಂದಲ್ಲ ಒಂದು ಕಲಹಗಳು ಸಂಭವಿಸಿ ಸಂಘರ್ಷವು ನಡೆಯುತ್ತಲೇ ಇರುವುದು. ಒಬ್ಬೊಬ್ಬರೇ ಆದರೂ ಅಧಿಕಾರಸ್ಥಾನದಲ್ಲಿ ಈ ನೆಲೆ ಕಂಡುಬರುವುದಾಗಿದೆ.

ಮಾನವ ಸಮಾಜವು ರಾಶಿಚಕ್ರದ ತೃತೀಯವಾದ ಈ ಕುಟುಂಬ ರಾಶಿಯಲ್ಲಿ ಮೆಲ್ಲಮೆಲ್ಲನೆ ಶಾಸ್ತ್ರಗಳ ಪ್ರಗತಿಯನ್ನು ಸಾಧಿಸಿತು. ವೃಶ್ಚಿಕ ರಾಶಿಯಲ್ಲಿ ಹುಟ್ಟಿಯೋಗದಿಂದ ಮಾನವನು ಬಳಲುವನು. ಈ ರಾಶಿಯಲ್ಲಿ ಮಾನವನು ಜ್ಞಾನದ ಪರಿಣತಾವಸ್ಥೆಯನ್ನು ಹೊಂದುವನು. ಯುದ್ಧದಲ್ಲಿ

ಜಯಾಪಜಯುಗಳು ಇವೆ. ಒಂದರ ಪರಿಣಾಮ ಇದ್ದೇ ಇರುವುದು. ಈ ರಾಶಿಯು ಮಾನವನ ಜಂಘಸ್ಥಾನದ ಮೇಲೆ ಪರಿಣಾಮವನ್ನುಂಟು ಮಾಡುತ್ತಿರುವುದು. ಅಧ್ಯಯನಾಸಕ್ತಿ ಈ ರಾಶಿಯವರಿಗೆ ಸದಾ ಇರುತ್ತದೆ. ಯಾವುದನ್ನು ಅಧ್ಯಯನ ಮಾಡುವನೆಂದು ಪಂಚಮ ಸಂಪರ್ಕದ ಗ್ರಹರಿಂದ ವಿವೇಚಿಸಬೇಕಿದೆ. ವಿಲಾಸ ಜೀವನದಲ್ಲಿ ಆಸಕ್ತರಾಗಿ ಸದ್ಗುರು ಪ್ರೇರಣೆಯಿಂದ ಜ್ಞಾನಾರ್ಜನೆಗೆ ಹೊರಡುವರು. ಅಂತ್ಯಕಾಲದಲ್ಲಿ ದೇವರ ಭಕ್ತಿ ಹೆಚ್ಚುತ್ತಿರುವುದು. ರಾಜಸಂಪತ್ತಿನ ಮನುಷ್ಯರನ್ನೇ ಮೆಚ್ಚುತ್ತಿದ್ದು ಅವರ ಸ್ನೇಹವನ್ನು ಬಯಸುತ್ತಾರೆ. ಅನ್ಯರನ್ನು ಅಲ್ಪವಾಗಿ ಕಾಣುತ್ತಾರೆ.

ಧನುದ್ವಿಸ್ವಭಾವರಾಶಿ, ದ್ವಿಪಾದರಾಶಿಯೂ ಹೌದು. ನಿರ್ಜಲ ಭೂಮಿತಲ, ಅಗ್ನಿತತ್ವ, ಉಷ್ಣಪ್ರಕೃತಿ, ದಿನರಾಶಿ, ನೀಲಮಿಶ್ರಿತವಾದ ಕೆಂಪು ಬಣ್ಣ, ದ್ವಿಶರೀರರಾಶಿ, ವಿಷಮರಾಶಿ, ಪುರುಷರಾಶಿ, ಪುರುಷತತ್ವ, ಮಧ್ಯಾಹ್ನನಂತರ ಬಾಧಿಯರ್ಾವಸ್ಥೆ, ಸಂಧಿರಾಶಿ, ಕಾಲಪುರುಷನ ತೊಡೆಯು ರಾಶಿ, ಮಧ್ಯದೇಹ, ಪೂರ್ವದಿಕ್ಕು, ಸತ್ವಗುಣಿ, ಅಶ್ವ, ಗಜ, ರಥಶಾಲೆ, ನಿವಾಸಭೂಮಿ, ಉರುಳುವಿಕೆ, ಮಾಲುವಿಕೆ, ಬಾಗುವಿಕೆ, ಶಾರೀರಿಕದೃಶ್ಯ ಮಾನಸಿಕ ದೃಶ್ಯ ನವನವೋನ್ಮೇಶ, ಪ್ರಧಾನ ಲಕ್ಷಣ ಸಾಧು ಯಾ ಅಧಿಕಾರಿಯಾಗುವಿಕೆ, ಅಧಿಕಾರ ಧೋರಣೆಗೊಳ್ಳುವಿಕೆ, ರಾಜ್ಯಪಾಲನಾಗುವಿಕೆ ಇತ್ಯಾದಿ. ಮೂಲಸ್ವಭಾವ ಪಶುವೃತ್ತಿ ಮತ್ತು ಜ್ಞಾನವೃತ್ತಿ ಎಂದು ಮೊದಲಾಗಿ ಈ ರಾಶಿವಿಚಾರದಲ್ಲಿ ಪೂರ್ವಾಚಾರ್ಯರು ವರ್ಣಿಸಿರುವರು.

ಈ ರಾಶಿಯವರು ಯೋಗಭ್ರಷ್ಟರಾಗಿ ಶ್ರೀಮಂತರ ಕುಟುಂಬದಲ್ಲಿ ಜನನಗೊಳ್ಳುವರು. ಯೋಗಭ್ರಷ್ಟರಾಗಿ ಅವರ ಮನಸ್ಸಿನಲ್ಲಿ ಸ್ತ್ರೀಭೋಗ ಲಾಲಸೆ ಅತೃಪ್ತವಾಗಿರುವುದು. ಅದಕ್ಕಾಗಿಯೇ ಧನವಂತರ ಕುಟುಂಬದಲ್ಲಿ ಜನ್ಮವೆತ್ತುವರು. ಬಾಲ್ಯಕಾಲ ಯಾ ಜೀವನದ ಪೂರ್ವಾರ್ಧ ಸ್ತ್ರೀಯರೊಂದಿಗಿದ್ದು ಪಶುವರ್ತನೆಗೊಳ್ಳುವರು. ಪಶುಗಳಂತೆ ಅನೇಕ ಸ್ತ್ರೀಯರ ಹಿಂದೆ ಹೋಗುವರು. ಅಂತ್ಯಕಾಲದಲ್ಲಿ ಜ್ಞಾನಗೊಳ್ಳುತ್ತಾರೆ. ಈ ರಾಶಿಯವರಲ್ಲಿ ಜ್ಞಾನ ಮತ್ತು ಪಶುವೃತ್ತಿಗಳು ತುಂಬಿರುವವು. ಮಾನವನು ಅನೇಕ ಜನ್ಮಾನಂತರ ಜ್ಞಾನಿಯಾಗುವನು. ಜ್ಞಾನಕ್ಕೆ ಗುರುಜನಬೋಧೆ

ಮುಖ್ಯ. ಜ್ಞಾನಿಗಳ ಸಂಸರ್ಗದಿಂದಲೇ ಜ್ಞಾನಿಗಳಾಗುವರು.

ತುಲಾಂರಾಶಿ ಪತಿ, ವೃಶ್ಚಿಕರಾಶಿ ಪತ್ನಿ. ಧನುರಾಶಿ ಪುತ್ರ. ತುಲಾ ವೃಶ್ಚಿಕ ರಾಶಿಗಳ ಗುಣಧರ್ಮಗಳು ಸಮನ್ವಯ ಈ ರಾಶಿಯವರಿಗೆ ಬರು ವುದು. ವಿಶ್ವಕುಟುಂಬದ ಮೂರನೆ ಕುಟುಂಬವಾಗಿದ್ದು ಪಾರಮಾರ್ಥಿ ಕಕ್ಕೆ ಈ ರಾಶಿ ಸೇರುವುದು.

ಈ ರಾಶಿಯ ಸತ್ವಗುಣಿಗಳು ಪರೋಪಕಾರಿಗಳೂ, ನಿಸ್ವಾರ್ಥಿಗಳೂ, ಅವ್ಯಭಿಚಾರಿಗಳೂ, ದಯಾಳುಗಳೂ, ಪ್ರೇಮಜೀವನದವರೂ, ಜ್ಞಾನಿಗಳೂ, ವಿಶ್ವಬಂಧುತ್ವವನ್ನಿಡುವವರೂ, ಜನತೆಯಲ್ಲಿ ಅಧಿಕಾರವನ್ನು ನಡೆಸುವವರೂ ಆಗುವರು ಎಲ್ಲಾ ಗುಣಸಮುಚ್ಚಯವೂ ಇರುವುದು. ಸಾಧುಪುರುಷ ಇಲ್ಲವೇ ಕ್ರಾಂತಿಕಾರಿಗಳಾಗುವರು. ಯಾರಿಂದಲೂ ತುಳಿತಗೊಳ್ಳುವುದಿಲ್ಲ

ರಜೋಗುಣಿಗಳು ಅತಿ ಶ್ರಮಿಗಳೂ ಪರೋಪಕಾರಿಗಳೂ ನ್ಯಾಯಾ ನ್ಯಾಯ ಪಾರಂಗತರೂ, ಬುದ್ಧಿವಂತರೂ ಅನ್ಯರಿಗಾಗಿ ಕಷ್ಟವನ್ನು ಅನುಭ ವಿಸುವವರೂ ಆಗುವರು. ಜ್ಞಾನಿಗಳಾಗಿದ್ದು ಅಹಂಕಾರಭಾವನೆ ಮನಸ್ಸನ್ನು ಹೊಂದಿರುವುದು.

ತಮೋಗುಣಿಗಳು ದುರಾಗ್ರಹಿಗಳೂ ಅಸತ್ಯವಾದಿಗಳೂ ಅತಿಚಂಚ ಲರೂ ತಮ್ಮ ಕರ್ತವ್ಯಶಕ್ತಿಯಲ್ಲಿ ಸುಳ್ಳು ಕಲ್ಪನೆಗೊಳ್ಳುವವರೂ ಆಗುವರು. ಸ್ತ್ರೀ ಸುಖ ಅಲ್ಪವಾಗಿಯೇ ಉಂಟಾಗುವುದು.

ಚಂದ್ರಹಾಸನು ಮೂಲನಕ್ಷತ್ರದವ, ಧನುರಾಶಿಯವ. ಆತನಿಗೆ ಬಾಲ್ಯ ಕಷ್ಟದ್ದು. ಮುಂದೆ ರಾಜನಾದನು, ಆತನ ಜೀವನದಲ್ಲಿ ಹಲವಾರು ರಾಜ ತಂತ್ರ ಭೋಗತಂತ್ರಗಳಾಗಿರುವವು. ಅಂತೆಯೇ ಸ್ತ್ರೀ ಸುಖ ಜೀವನ ದಲ್ಲಿ ಈ ರಾಶಿಯವರಿಗೆ ತಂತ್ರವರ್ತನೆ ಕಾಣುವುದಾಗಿದೆ. ಭೋಗಲಿಪ್ಸೆ ಅಧಿಕ ಈ ರಾಶಿಯವರಿಗೆ ಜೀವನದ ಪೂರ್ವಾರ್ಧದಲ್ಲಿರುವುದು. ಅಂತ್ಯ ಕಾಲ ಜ್ಞಾನ ಮಾರ್ಗಕ್ಕೆ ಹರಿಯುವುದಾಗಿದೆ.

**ಮಕರ**

ಮಕರವು ರಾಶಿಚಕ್ರದಲ್ಲಿ ಹತ್ತನೆಯ ರಾಶಿ. ಮಕರ ಎಂಬ ಪದಕ್ಕೆ

ಮೊಸಳೆ ಎಂಬ ಅರ್ಥ. ರಾಶಿಸ್ವರೂಪವನ್ನು ಜಿಂಕೆಯ ಮೊಗದಿಂದ ಕೂಡಿದ ನೊಸಳೆಯಾಗಿ ಕಾಣಬಹುದು. ವರಾಹನು "ಏಣಾಸ್ಯೋ ಮಕರಃ" ಎಂದು ರಾಶಿ ಸ್ವರೂಪ ವಿಷಯದಲ್ಲಿ ಹೇಳಿರುವನು.

ಮಕರ ರಾಶಿಯವನು ಹಟವಾದಿತನದಿಂದ ಕೂಡಿದವನಾಗಿರುವನು. ಮೊಸಳೆಗೆ ತಾನು ಹಿಡಿದುದನ್ನು ಬಿಡಲರಿಯದು. ಅಂತೆಯೇ ಈ ರಾಶಿಯ ವರಿಗೆ ತಾವು ಹಿಡಿದ ಛಲವನ್ನು ಬಿಡಲಾಗುವುದಿಲ್ಲ. ಮೊಸಳೆ ಜಲಜೀವಿ. ಸಮುದ್ರ ಇದರ ನಿವಾಸಸ್ಥಾನ. ಮರಳಿನಲ್ಲಿ ಅವಿತು ಇರುವುದನ್ನೂ ಕಾಣುವೆವು. ಇದು ಒರಟಾದ ಪ್ರಾಣಿ. ಆದ್ದರಿಂದಲೇ ಒರಟು ಸ್ವಭಾವ ಈ ರಾಶಿಯವರಲ್ಲಿ ಕಾಣುವುದುಂಟು. ಯಾವ ಕೆಲಸವನ್ನೇ ಹಿಡಿಯಲಿ, ಸ್ವಧೋರಣೆಯ ಕಡೆಗೆ ವಿಶೇಷ ಗಮನ ಇಂತಹರಲ್ಲಿ ಕಾಣಬರುತ್ತಿರುವುದು.

ಈ ರಾಶಿಯ ಅಧಿಪತಿ ಶನಿ. ಶನಿಗೆ ತುಲಾ ಉಚ್ಚ. ಕುಂಭ ಮೂಲ ತ್ರಿಕೋಣ ರಾಶಿ. ಮಕರ ಕಾಲಪುರುಷನ ದಶಮ ಸ್ಥಾನ. ಇದನ್ನೇ ಸಭಾಸ್ಥಾನವೆಂದೂ ಹೇಳುವೆವು. ಮಕರದಲ್ಲಿರುವ ಗ್ರಹರಿಗೆ ವಿಶೇಷ ಮಹತ್ವವಿದೆ. ಇಲ್ಲಿರುವ ಗ್ರಹರು ಸ್ವಾತಂತ್ರ್ಯ ಪ್ರೇಮವನ್ನು ಕೊಡುವರು. ಮಕರದಲ್ಲಿ ರವಿ, ಚಂದ್ರ, ಶನಿ ಶುಕ್ರರಲ್ಲೊಬ್ಬರು ಇರುವರಾದರೆ ಆತನು ಸ್ವಾರ್ಜಿತ ಸಂಪತ್ತಿನಿಂದಲೇ ಬಾಳುವನು. ಹಿರಿಯರ ಸಂಪತ್ತಿರುವುದಾದರೂ ಅದನ್ನು ಮುಟ್ಟುವುದಿಲ್ಲ. ಮಕರದಲ್ಲಿರುವ ರವಿ ಚಂದ್ರ ಶುಕ್ರರಿಗೆ ವಿಶೇಷ ಪ್ರಾತಿನಿಧ್ಯವನ್ನು ಕೊಡಬೇಕಿದೆ. ಇದರಿಂದ ರಾಜಕೀಯದ ಧೋರಣೆ ನಡತೆಯಲ್ಲಿ ಕಂಡುಬರುತ್ತಿದ್ದು ಆಜ್ಞೆಯನ್ನು ಕೊಡುವ ಮನುಷ್ಯರಾಗಿರು ವರು. ಸಮಾಜದಲ್ಲಿ ಉತ್ಕೃಷ್ಟವಾದ ಸ್ಥಾನಮಾನಗಳನ್ನು ಕಂಡು ಬರುವೆವು. ಯಾರನ್ನೂ ಲಕ್ಷಿಸದೆ ನಡೆಯುವವರಾಗಿರುವರು. ದೊಡ್ಡ ದೊಡ್ಡ ಮನುಷ್ಯರ ಸಹವಾಸ ಸಂಪರ್ಕಗಳಿರುತ್ತವೆ. ಅನ್ಯರಿಗೆ ಬಗ್ಗಿ ನಡೆಯುವ ಅಭ್ಯಾಸವಿ ರುವುದಿಲ್ಲ. ಮಕರದಲ್ಲಿ ಬುಧನಿರುವುದು ಒಳ್ಳೆಯದಲ್ಲ. ಅವನು ಉತ್ತಮ ಫಲವನ್ನು ಕೊಡಲುಶಕ್ತನಾಗಿರುವುದಿಲ್ಲ. ಮಕರದಲ್ಲಿ ಶುಕ್ರನಿರುವವನು ಸ್ವಾರ್ಜಿತ ಧನದಿಂದಲೇ ಬಾಳುವನು. ಪೈತೃಕ ಧನವನ್ನುಣ್ಣುವುದಿಲ್ಲ.

ಮಕರ ರಾಶಿಯವನು ತುಂಬಾ ಗಾಂಭೀರ್ಯತೆಯಿಂದ ಕೂಡಿದವ ನಾಗಿರುವನು. ಸಮುದ್ರದ ಗಂಭೀರತೆ ಇರುವುದು. ಎಷ್ಟು ಆರ್ಥಿಕವಿದ್ದರೂ ಅದರ ಸುಖ ಹಲವರಿಗಿರುವುದಿಲ್ಲ. ಕೌಟುಂಬಿಕ ಶಾಂತಿ ಕಂಡುಬರುವುದಿಲ್ಲ. ಯಾವಾಗಲೂ ಒಂದಲ್ಲ ಒಂದು ಕೆಲಸವಿದ್ದು ಶಾಂತಿ ಕಡಿಮೆ. ವಿರಾಮ ವನ್ನು ಹೊಂದಲಾಗುವುದಿಲ್ಲ. ನೋಡುವಾಗ ಶಾಂತರಾಗಿ ಕಂಡು ಬಂದರೂ ತೀವ್ರತೆಯಿಂದ ಕೂಡಿರುವರು. ಯಾರೊಡನೆಯೂ ಸೇರಿಕೊಳ್ಳಲಾಗುವು ದಿಲ್ಲ. ಕೊನೆಗೆ ಸೇರಿದಲ್ಲಿ ದ್ವೇಷವೇ ಉಂಟಾಗುತ್ತಿರುವುದು.

ಕರ್ಕ ಸಿಂಹರಾಶಿಗಳಲ್ಲಿ ರಾಜ್ಯ ಸ್ಥಾಪನೆಯಾಯಿತು. ಮಕರದಲ್ಲಿ ಸಾಮ್ರಾಜ್ಯ ವಿಸ್ತಾರದ ಲಾಲಸೆಯುಂಟಾಯಿತು. ಮಾನವ ಸಮಾಜದ ಕಲ್ಯಾಣ ಸಾಧನೆಗಾಗಿ ದೊಡ್ಡ ದೊಡ್ಡ ಸಂಸ್ಥೆಗಳನ್ನು ಹೊಂದುತ್ತಾರೆ. ಅಲ್ಲಿ ಕಲಹಗಳುಂಟಾಗಿ ಒಡಕುಗಳುಂಟಾಗುತ್ತವೆ. ವಿದೇಶ ಸಂಬಂಧ ವ್ಯವಹಾರ ಪ್ರಯಾಣಗಳೂ ಉಂಟಾಗುತ್ತವೆ. ಮಕರ ರಾಶಿಯವರು ಪ್ರಯಾಣ ಗೊಳ್ಳುತ್ತಾರೆ. ಹುಟ್ಟಿದ ಸ್ಥಳದಲ್ಲೇ ಇದ್ದುಕೊಳ್ಳಲಾಗುವುದಿಲ್ಲ. ಜಲಯಾನ ಸಂಪರ್ಕದ ವ್ಯವಹಾರಗಳನ್ನು ಹೊಂದುವವರು ಇರುವರು. ರಾಜ್ಯ ಕುಟುಂಬದ ಸುಧಾರಣೆಗಳುಳ್ಳ ಕೆಲಸವನ್ನು ಕೈಕೊಳ್ಳುತ್ತಿರುವರು. ಆದ್ದರಿಂದ ಸದಾ ಅಪವಾದ ಹೊಂದುತ್ತಲೇ ಇರಬೇಕಾಗುತ್ತದೆ. ಉದರ ಸಂಬಂಧದೋಷ ಉಷ್ಣದೋಷಗಳು ಹಲವರಿಗುಂಟಾಗುವುದುಂಟು.

ಪ್ರಾಚೀನರು ಇದನ್ನು ಚರರಾಶಿ, ರೂಕ್ಷಪ್ರಕೃತಿ, ರಾತ್ರಿರಾಶಿ, ಉದಾ ಸೀನ ಸ್ವಭಾವವೆಂದು ಹೇಳಿರುವರು. ಇದು ಜಲರಾಶಿ. ಚತುಷ್ಪಾದ, ಜಲಚರಜೀವಿ. ಸಾಧಾರಣ ಪ್ರಸವರಾಶಿ, ಸಮರಾಶಿ, ಸ್ತ್ರೀರಾಶಿ, ಸ್ತ್ರೀತತ್ವ. ಮಧ್ಯಾಹ್ನಾನಂತರ ಬಾಧಿರ್ಯರಾಶಿ. ಸಂಧಿಕಾಲ ಪಂಗುತ್ವವಿರುವುದು. ಮಧ್ಯದೇಹಿ, ದಕ್ಷಿಣ ದಿಕ್ಕು, ಜಾನುಸ್ಥಾನ, ತಾಮಸ ಸ್ವಭಾವ, ಪಶು ರಾಶಿ. ಪಾಶ್ಚಾತ್ಯರು ಇದನ್ನು ಭೂಮಿ ರಾಶಿ ಎನ್ನುವರು. ಈ ರಾಶಿಯವರು ಜ್ಞಾನಿಗಳಾಗಿರುವರು. ಇದರಿಂದ ಅನ್ಯರು ಆಶ್ರಯಿಸ ಬೇಕಾಗುತ್ತದೆ. ಆವುದಾದರೂ ಒಂದು ವಿಷಯದಲ್ಲಿ ಜ್ಞಾನಸಂಬಿದ್ದು ಜನತೆ ಅದಕ್ಕಾಗಿ ಆಶ್ರಯಿಸುತ್ತಿರುವುದು. ನಿವಾಸಸ್ಥಾನ ನದಿ ಯಾ ಸಮುದ್ರಸ್ಥಾನ. ಶ್ರದ್ಧೆಯೇ

ಪ್ರಧಾನ ತತ್ವ. ಪ್ರತಿಯೊಂದರಲ್ಲಿಯೂ ಸುಧಾರಣೆಯ ಆಸಕ್ತಿಯು ಕಂಡು ಬರುವುದು. ಸಾಹಸಧಾತು. ಸ್ಫೂರ್ತಿ ಪ್ರದ ಶಾರೀರಿಕ ದೃಶ್ಯ. ಏಕಾಗ್ರ ವ್ಯಕ್ತಿ ಮಾನಸಿಕ ದೃಶ್ಯ. ಪರರಾಷ್ಟ್ರೀಯ ಯಾ ಪರಸಂಬಂಧ ವಿಚಾರ ಧೋರಣೆಯ ನ್ಯಾಯಗಾರ, ಪ್ರತಿಯೊಂದು ಕೆಲಸದಲ್ಲಿಯೂ ಅಗ್ರಸ್ಥಾನ ವನ್ನು ವಹಿಸುವುದು ಈ ರಾಶಿಯ ಮೂಲ ಸ್ವಭಾವ.

ಈ ರಾಶಿಯವರು ಯಾರ ಮಾತನ್ನೂ ನಂಬುವುದಿಲ್ಲ. ಹೊರ ಒಳ ವಿಚಾರ ಬೇರೆ ಬೇರೆಯಾಗಿರುವುದು. ಹೊರ ತೋರುವ ಹಲ್ಲು ಮೊಸಳೆಗೆ ಬೇರೆ. ಒಳ ಹಲ್ಲು ಬೇರೆ. ಅಂತೆಯೇ ಈ ರಾಶಿಯವರ ಹೃದಯ. ಗರಗಸದಂತಹ ಹಲ್ಲುಗಳು ಮೊಸಳೆಗೆ. ಸುಖಾಪೇಕ್ಷಸ್ವತ್ತಿ ಸ್ವಭಾವದವ ರಾದ ಕಾರಣ ಕಷ್ಟ ಬಂದಾಗ ಮನೆಯಲ್ಲಿದ್ದು ಕಣ್ಣೀರು ಸುರಿಯುವರು. ಮನೆಯನ್ನು ಬಿಟ್ಟು ಹೋಗಲಿಚ್ಛಿಸುವುದಿಲ್ಲ. ಅನಿಷ್ಟಯೋಗ ಅನ್ಯಗ್ರಹ ರಿಂದುಂಟಾದವರು ಆತ್ಮಹತ್ಯೆಗೂ ಹೇಸುವುದಿಲ್ಲ. ದೇಹದ ದಂಡನೆಯನ್ನು ಮಾಡಿಕೊಳ್ಳುತ್ತಿರುವರು.

ಈ ರಾಶಿಯ ಮನುಷ್ಯರು ಅತಿ ಅಹಂಕಾರಿಗಳಾಗುವರು. ತಾವೇ ಮಹಾ ಪ್ರಾಜ್ಞರೆಂಬ ಭಾವನೆಯಿಂದ ಕೂಡಿದವರಾಗುವರು. ಇದರಿಂದಲೇ ಯೋಗಾ ಭ್ಯಾಸಕ್ಕೆ ಪ್ರವೃತ್ತರಾಗುವುದಿಲ್ಲ. ವಿವಿಧ ವಿದ್ಯಾಸಕ್ತಿಯಿಂದ ಕೆಲವು ಕಲೆಗಳು ಬರುವವು. ಲೋಭಿಗಳೂ ಸ್ವಾರ್ಥಿಗಳೂ ಆಗಿರುವರು. ಚರ್ಚಿ ಲರು ಮಕರ ರಾಶಿಯವರು. ದೈವೀಗುಣ ಬಂದರೆ ಪ್ರಪಂಚದ ರಕ್ಷಣೆಗೆ ಹೊರಡುವರು. ಅನ್ಯಥಾ ಪ್ರಪಂಚದ ನಾಶಕ್ಕಾಗಿಯೇ ಪ್ರಯತ್ನಿಸುವರು. ಅನೇಕ ಬಗೆಯ ಕಲಾಚಮತ್ಕಾರಗಳುಳ್ಳವರಾಗಿದ್ದು ಅವುಗಳನ್ನು ಪ್ರದರ್ಶಿ ಸುವರು. ಧನಸಂಗ್ರಹವನ್ನು ಮಾಡುತ್ತಿರುವರು. ಹೆಂಡತಿಯ ಆರೋಗ್ಯ ಸುಖ ಕಡಮೆಯಾಗಿರುವುದು. ಮಕ್ಕಳು ದೂರವಾಗಿಯೇ ಇರುವರು. ಕುಟುಂಬದೊಂದಿಗೆ ಇರಲಾಗುವುದಿಲ್ಲ. ಕುಟುಂಬೀಯರಿಂದ ದೂರನಾಗಿ ರುತ್ತಾರೆ. ಉನ್ನತ ಸ್ಥಾನಮಾನ ಸಂಪರ್ಕಗಳಿರುತ್ತವೆ. ಯಾವಾಗಲೂ ಒಂದು ಭಾಗವನ್ನು ಅವಲಂಬಿಸಿ ನಡೆಯುವ ಧೋರಣೆಯಿರುತ್ತದೆ. ಸ್ವಾರ್ಥ ಸಾಧನೆಯ ಧೋರಣೆಯಿಂದ ಕೂಡಿದವರಾಗಿರುವರು.

ಸತ್ವಗುಣದಿಂದ ಕೂಡಿದ ಈ ರಾಶಿಯವರು ಲೋಕ ಕಲ್ಯಾಣ ಸಾಧನೆಯ ಪ್ರಯತ್ನಯುಕ್ತರಾಗುತ್ತಾರೆ. ಮನಸ್ಸಿನಲ್ಲಿ ಶಾಂತಿಯನ್ನಿರಿಸಿ ಲೋಕ ಶಾಂತಿಯ ಸಾಧನೆಗಿರುವ ಮಾರ್ಗವನ್ನು ಹುಡುಕುತ್ತಿರುವವರು ಲೋಕ ಹಿತಸಾಧನೆಯ ಕರ್ತವ್ಯ ಗೊಂಡು ಸೇವೆಯೇ ತಮ್ಮ ಧರ್ಮವೆಂಬ ಭಾವನಾಯುಕ್ತರಾಗುವರು. ವೈದ್ಯಕೀಯ ಅಥವಾ ರಾಜಕೀಯ ಸಂಪರ್ಕ ಗೊಳ್ಳುತ್ತಿರುವರು. ಗುರು ಸಂಬಂಧಗೊಂಡವರು ಬೋಧಕವೃತ್ತಿಯನ್ನು ಅವಲಂಬಿಸುವರು.

ರಜೋಗುಣಿಗಳು ಸ್ವಾರ್ಥ ಹೆಚ್ಚಿರಿಸುವುದಿಲ್ಲ. ದೊಡ್ಡ ದೊಡ್ಡ ಕೆಲಸ ವನ್ನು ಮಾಡುವವರಿದ್ದು ಅನ್ಯರಿಗೆ ಲಾಭವನ್ನುಂಟು ಮಾಡುವುದರೊಂದಿಗೆ ತಮ್ಮ ಲಾಭವನ್ನು ಕಂಡು ಕೊಳ್ಳುವರು.

ತಮೋಗುಣಿಗಳು ದುಷ್ಟರೂ ವ್ಯಸನಿಗಳೂ, ವ್ಯಭಿಚಾರಾಸಕ್ತರೂ, ಅಹಂಭಾವಿಗಳೂ ತಮ್ಮ ಸ್ವಾರ್ಥಕ್ಕಾಗಿ ಅನ್ಯರನ್ನು ಹಾಳುಮಾಡುವವರೂ ಸರ್ವಜ್ಞರೆಂಬ ಭಾವನೆಗೊಂಡು ಅನ್ಯರಿಂದ ಮೇಲ್ಪಟ್ಟವನ್ನೇ ಬಯಸುತ್ತಾರೆ. ಅನ್ಯರ ಸಂಪತ್ತಿನ ಅಭಿಲಾಷೆಯಿಂದ ಕೂಡಿದವರಾಗುವರು.

ಮಕರ ಕಾಲ ಪುರುಷನ ಸಭಾಸ್ಥಾನವಾಗಿದ್ದು ಈ ರಾಶಿಯವರಿಗೆ ಜೀವನದಲ್ಲಿ ಒಂದು ಬಗೆಯ ಸ್ಥಾನ ಇದ್ದೇ ಇರುವುದು.

## ಕುಂಭ

ಕುಂಭ ರಾಶಿಚಕ್ರದ ಹನ್ನೊಂದನೆಯ ರಾಶಿ. ಇದು ಗೋಳ ಅಂತ್ಯಪಾದಕ್ಕೆ ಸೇರಿದ ರಾಶಿ ಗೋಲಾಂತ್ಯಪಾದದ ಎರಡನೇ ರಾಶಿಯಾಗಿದ್ದು ಬರಿದಾದ ಕೊಡವನ್ನು ಹೆಗಲ ಮೇಲಿರಿಸಿದ ಪುರುಷನ ಸ್ವರೂಪದಲ್ಲಿ ಇದನ್ನು ಕಾಣಬಹುದು. ಈ ರಾಶಿಯು ಶನಿಯ ಮನೆ. ಶನಿಗೆ ಕುಂಭ ಮೂಲ ತ್ರಿಕೋಣ ರಾಶಿ, ಯಾವ ಗ್ರಹನೇ ಇರಲಿ, ಎರಡು ರಾಶ್ಯಾಧಿಪತ್ಯ ಸಂಬಂಧ ಹೊಂದಿದರೆ ಅವನಿಗೆ ಮೂಲ ತ್ರಿಕೋಣ ರಾಶಿಯ ಫಲವನ್ನು ಹೇಳಬೇಕು.

ಕುಂಭ ಅಂದರೆ ಕೊಡನೆಂಬ ಅರ್ಥ. ಬರಿದಾದ ಕೊಡವನ್ನು ಹೆಗಲಲ್ಲಿ ಧರಿಸಿದ ಪುರುಷನ ಸ್ವರೂಪ ಈ ರಾಶಿಯವ್ವಾದ್ದರಿಂದ ಕೊಡದ ಫಲ ಮತ್ತು

ಮನುಷ್ಯನ ಫಲವನ್ನು ಹೇಳಬೇಕಿದೆ. ಎರಡು ವಸ್ತುಗಳ ಸಂಪರ್ಕ ಈ ರಾಶಿಗಿದ್ದು ಈ ರಾಶಿಯವರಲ್ಲಿ ಎರಡು ಬಗೆಯ ಮನುಷ್ಯರನ್ನು ಕಾಣಬಹುದು. ಸಮಾಜದ ಹಿತಕ್ಕಾಗಿ ದುಡಿಯುವವರು, ಸಮಾಜಕ್ಕಾಗಿ ಅಥವಾ ಜನತೆಗಾಗಿ ತ್ಯಾಗ ಜೀವನದ ವರ್ತನೆ ಗೊಳ್ಳುವವರು ಒಂದು ಸಾಲಿನವರು. ಇನ್ನೊಂದು ಸಾಲಿನವರು ತನ್ನ ಬಂಧು ಪರಿವಾರ ಅಥವಾ ಸಮಾಜವನ್ನು ಹೊಂದಿ ಬಾಳುತ್ತಿರುವವರು. ಈ ಎರಡು ಬಗೆಯುವರಲ್ಲೂ ಅಂತರವಿದೆ. ಅನ್ಯರ ಹಿತವನ್ನು ಪಡೆದು ಯಾವ ಸುಖೋಪಭೋಗವನ್ನೂ ಹೊಂದದೆ ತ್ಯಾಗಮಯ ಜೀವನವನ್ನೇ ನಡೆಸುತ್ತಿರುವವರೂ ಇರುವರು. ಮಾತ್ರವಲ್ಲದೆ ತ್ಯಾಗದೊಂದಿಗೆ ತಾವು ಕಷ್ಟವನ್ನು ಹೊಂದುವರು. ಕುಟುಂಬ ಬಂಧುಬಳಗಕ್ಕಾಗಿ ತ್ಯಾಗ ಜೀವನವನ್ನು ನಡೆಸಿ ಕೊನೆಗೆ ಅವರೆಲ್ಲರಿಂದಲೂ ದೂರವಾಗಿ ಕಷ್ಟಮಯ ಜೀವನವನ್ನು ನಡೆಸುತ್ತಿರುವರಾದರೂ ಕಷ್ಟ ಕಾಲದಲ್ಲೂ ಮಾನವನ ತ್ಯಾಗ ಜೀವನವನ್ನೇ ತೋರುತ್ತಿರುವರು. ತಮ್ಮಿಂದ ಆಗಬಹುದಾದ ತ್ಯಾಗವನ್ನು ಮಾಡುತ್ತಲೇ ಇರುವರು. ಕೊಡವು ಅನ್ಯರ ಉಪಯೋಗಕ್ಕೆ ಬಿದ್ದು ನುಚ್ಚುನೂರಾಗಿ ಕೊನೆಗೆ ಅಂತ್ಯಗೊಳ್ಳುವಂತೆ ಎಲ್ಲಾ ಸಂಪತ್ತೂ ಅನ್ಯರನ್ನು ಹೊಂದುವುದು. ಅನ್ಯರನ್ನು ಪೋಷಿಸುತ್ತಿರುವರು. ಪೋಷಣಾಧರ್ಮ ಈ ರಾಶಿಯದು. ಪೋಷಣಾಕಾರ್ಯ ಬೋಧನಾಕಾರ್ಯ, ಸಂಸ್ಥಾಪರ ವೃತ್ತಿ, ಸಮಾಜ ಸೇವೆಯೇ ಮೊದಲಾದುವುಗಳು ಇವರಿಂದ ನಡೆಯುತ್ತಿರುವವು.

ಕೊಡವನ್ನು ಹೆಗಲ ಮೇಲೆ ಹೊತ್ತು ಅನ್ಯರ ಉಪಕಾರ ಕರ್ಮವನ್ನು ಮಾಡುವ ಕೆಲಸ ನಡೆಯುವುದಾದರೂ ಪರರ ಪೋಷಣೆಯೇ ಕೊಡದಿಂದ ನಡೆಯುವುದಾಗಿದ್ದು ಪರಪೋಷಣೆಯೇ ಈ ರಾಶಿಯವರಿಂದ ಪ್ರಥಮತಃ ನಡೆಯುವುದು. ಆ ಮೇಲೆ ಅಲ್ಲಿ ಇಲ್ಲಿ ಇದ್ದು ಜೀವನ ರಂಗದಲ್ಲಿ ತುಂಬಾ ಕಷ್ಟವನ್ನು ಹೊಂದಿ ಮುಂದಕ್ಕೂ ಕಷ್ಟವನ್ನೇ ಹೊಂದುವರು. ತಮ್ಮ ಧನ ಸಂಪತ್ತು ಹಾಗೂ ದುಡಿತ ಪರರ ಪಾಲಿಗೆ ಅಧಿಕ ಸೇರುವುದು.

ಕುಂಭ ಜ್ಞಾನರಾಶಿ. ಮಕರ ರಾಶಿಯ ಕೊನೆಗೆ ಮಾನವ ಸಮುದಾಯವು ಜೀವನದ ಎಲ್ಲಾ ರಂಗದಲ್ಲಿಯೂ ಅಭಿವೃದ್ಧಿ ಹೊಂದಿದ್ದು ಕುಂಭಕ್ಕೆ

ಆ ಮೇಲಿನ ಸ್ಥಾನ ಇದ್ದರಿಂದ ಈ ರಾಶಿಯುವರಲ್ಲಿ ಎಲ್ಲಾ ಬಗೆಯ ಜನರನ್ನೂ ಹೊಂದುವೆವು. ವೃಶ್ಚಿಕದಲ್ಲಿ ಹಟಯೋಗ ಮತ್ತು ಜ್ಞಾನಬಲಸಿದ್ಧಿಗಳಿರುತ್ತವೆ. ಧನುರಾಶಿಯಲ್ಲಿ ಜ್ಞಾನಯೋಗವನ್ನು ಕಾಣುವೆವು. ಮಕರ ರಾಶಿಯಲ್ಲಿ ಕರ್ಮಯೋಗವನ್ನು ಕಾಣುವೆವು. ರಾಜಯೋಗದಲ್ಲಿ ಇವೆಲ್ಲ ಪ್ರಗಳ ಸಮನ್ವಯವನ್ನು ಕಾಣುವೆವು. ಈ ರಾಶಿಯುವರಿಗೆ ರಾಜಯೋಗವನ್ನು ಅನುಭವಿಸುವ ಸಂಪರ್ಕ ಬರುತ್ತದೆ. ಇದರಿಂದ ಯಾವುದಾದರೂ ನೆಲೆಯಿಂದ ಉನ್ನತಾಧಿಕಾರ ಧೋರಣೆ ಕಾಣುವುದು. ಮೋಹದ ವಶಗೊಂಡು ಕೊನೆಗೆ ರಾಜಯೋಗಕ್ಕೆ ತಿರಸ್ಕಾರ ಕೊಡುವರು. ವೇದಾಂತಾದಿ ಜ್ಞಾನವಿರುವುದು ಕೌಟುಂಬಿಕರಿಂದ ಸುಖ ಕಡಮೆ. ದಾಂಪತ್ಯ ಜೀವನದಲ್ಲಿಯೂ ಎಡರು ತೊಡರುಗಳಿರುತ್ತವೆ.

ಈ ರಾಶಿ ಸ್ಥಿರ ರಾಶಿ. ಉಷ್ಣ ಪ್ರಕೃತಿ. ನಿಶಾರಾಶಿ. ಆಕಾಶದ ನೀಲ ಬಣ್ಣ. ಭಾವಾತ್ಮಕ ರಾಶಿ. ಭಾವ ಜೀವನ, ದ್ವಿಪಾದ, ವಾಯು ತತ್ತ್ವ, ಜಲಾಶ್ರಯ ರಾಶಿ, ಸಾಧಾರಣ ಪ್ರಸವ. ವಿಷಮ ರಾಶಿ. ದೀರ್ಘ ದೇಹಿಯಲ್ಲ. ಪುರುಷ ರಾಶಿ. ಪುರುಷ ತತ್ತ್ವ. ತಾಮಸ ಸ್ವಭಾವ. ವಕ್ತೃತ್ವ ಶಾಲಿಗಳು. ಬೋಧನಾ ಶಕ್ತಿ ಇರುವುದು. ಮನುಷ್ಯ ರಾಶಿ ಜಲಾಶ್ರಯದ ಸಮೀಪ ಅಥವಾ ವ್ಯಾಪಾರ ಸ್ಥಳ. ದೇವಾಲಯಾದಿಗಳ ಬಳಿ ವಾಸಸ್ಥಾನ. ರಾಶಿಯ ಪ್ರಧಾನ ತತ್ತ್ವ ಸತ್ಯ. ಹೃದಯದ ಗುಣ ಧರ್ಮ ಅನುಸಂಧಾನ. ಸೀಸತತ್ತ್ವ, ಕಪ್ಪು, ಕೆಂಪು ಬಣ್ಣ, ಧಾತು ಎಲ್ಯುಮಿನಿಯಮ್, ಕಲ್ಪನೆ, ಶಾರೀರಿಕ ದೃಶ್ಯ ಕಲ್ಪನೆಗಳು. ಮಾನಸಿಕ ದೃಶ್ಯ ನವೀನ ವಸ್ತುಗಳ ಅನ್ವೇಷಣೆ, ರಾಶಿಯ ಪ್ರಧಾನ ಲಕ್ಷಣ ಶಾಸ್ತ್ರೀಯ ಜ್ಞಾನ. ಮೂಲ ಸ್ವಭಾವ ಮಾನವೀಯತೆಗಳೆಂದು ಪ್ರಾಚೀನಾಚಾರ್ಯರುಗಳು ಹೇಳಿರುವರು.

ಈ ರಾಶಿಯುವರು ಅನ್ಯರ ಮೇಲೆ ವಿಶ್ವಾಸ ಗೊಂಡು ನಡೆಯುವರಲ್ಲ. ತಾವು ಸ್ವಯಂಪೂರ್ಣರೆಂದೂ ತಿಳಿದುಕೊಳ್ಳುವರು. ಶಾರೀರಿಕ ಪರಿಶ್ರಮ ಕರ್ಮಗಳನ್ನು ಮಾಡುವುದಿಲ್ಲ. ವಿಜ್ಞಾನ, ಕೆಮಿಸ್ಟ್ರಿ ಮತ್ತು ಫಿಜಿಕ್ ಶಾಸ್ತ್ರಗಳ ಪರಿಚಯವನ್ನು ಹೊಂದಿದವರು ವಿರಳರಾಗಿಯೇ ಇರುವರು.

'ಕುಂಭ ರಾಶಿಯ ಭಾವವೃಷ್ಟಿ ಪ್ರಕಾರದಲ್ಲಿ ತರುಣನಿಗೆ ನಾಮಕರಣ ವಾಯಿತು. ಆ ಹಬ್ಬದ ಸಮಾರಂಭಕ್ಕೆ ಹಲವಾರು ಮಂದಿಗಳು ಬಂದರು. ಹೆಂಗುಸರು ಸಂತೋಷದಿಂದ ಜೋಗುಳ ಗೊಂಡು ಹಾಡಿದಾಡಿದರು. ಆ ಹುಡುಗನಿಗೆ ವಿಕಾಸನೆಂಬ ನಾಮಕರಣವಾಯಿತೆಂದು ಹೇಳುವರು. ಇದರಿಂದ ಈ ರಾಶಿಯವರಲ್ಲಿ ಜ್ಞಾನ ವಿಕಾಸತೆಯು ಕಂಡು ಬರುತ್ತಿದ್ದು ಅದಕ್ಕಿರುವ ವಾತಾವರಣವನ್ನು ಪಡೆದು ಕೊಡುವುದು ಉಚಿತ.

ಕುಂಭ ರಾಶಿಗೆ ಸೇರಿದ ಗ್ರಹರನ್ನು ಹೊಂದಿ ಅವರಲ್ಲಿ ಸತ್ವ ರಜತಮೋ ಗುಣಗಳು ಸಂಭವಿಸುತ್ತವೆ. ರವಿಚಂದ್ರ ಗುರುಗಳು ಸತ್ವ ಗುಣ ಗ್ರಹರು. ಬುಧ ಶುಕ್ರರು ರಜೋಗುಣದವರು. ಕುಜ ಶನಿಗಳು ತಮೋ ಗುಣ ಗ್ರಹರು. ಈ ವಿಷಯವನ್ನೇ ವರಾಹನು 'ಚಂದ್ರಾರ್ಕ ಜೀವಾಜ್ಞಸಿತೌ ಕುಜಾರ್ಕೀ ಯಥಾ ಕ್ರಮಂ ಸತ್ವ ರಜಸ್ತಮಾಂಸಿ' ಎಂದು ಹೇಳಿರುವನು.

ಸತ್ವಗುಣದವರಲ್ಲಿ ಮಹಾ ವಿದ್ವಾಂಸರೂ, ಜ್ಞಾನಿಗಳೂ ಮತ್ತು ಮಿತಭಾಷಿಗಳೂ ಕಂಡು ಬರುತ್ತಿರುವರು. ಅನ್ಯರಿಗೂ ಉಪಕಾರ ಕರ್ತವ್ಯದಲ್ಲಿ ನಿರತರಾಗಿರುವರು, ಅಲ್ಲವಾದರೆ ಅನ್ಯರೊಡನೆ ಸಂಪರ್ಕ ಗೊಂಡು ಬಾಳುತ್ತಿರುವರು, ತಮ್ಮ ಕೆಲಸದಲ್ಲಿ ಮಗ್ನರಾಗಿದ್ದು ಪ್ರಪಂಚದ ಅನ್ಯವಿಚಾರಗಳನ್ನು ಕಾಣುವುದಿಲ್ಲ.

ಈ ರಾಶಿಯವರಲ್ಲಿ ರಜತಮೋಗುಣಗಳ ಸಂಪೂರ್ಣ ಪ್ರಭಾವವನ್ನು ಹೊಂದುವುದು ಕಠಿಣ. ಅತಿ ಸ್ವಾರ್ಥಿಗಳಾಗಿ ಕಾಣಲು ಸಾಧ್ಯವಿದೆ. ತಮ್ಮ ಸ್ವಾರ್ಥದ ಸಾಧನೆಗಾಗಿ ಅನ್ಯರಿಗೆ ಕಷ್ಟವನ್ನುಂಟುಮಾಡಲು ಸನ್ನದ್ಧರಾಗು ವರು. ಅತಿ ಲೋಭಿಗಳು ತಮ್ಮ ಹೆಂಡತಿ ಮಕ್ಕಳನ್ನೂ ಲಕ್ಷಿಸುವುದಿಲ್ಲ. ಇವರ ಮನಸ್ಸಿನಲ್ಲಿ ಯಾವ ವಿಚಾರಗಳು ಮೂಡುತ್ತಿವೆಯೆಂಬುದನ್ನು ಕಂಡು ಕೊಳ್ಳುವುದು ಕಠಿಣ. ನಿಷ್ಕ್ರಿಯತೆ ಜಡತೆಗಳು ಈ ರಾಶಿಯವರಿಗೆ ಪ್ರಧಾ ನವಾಗಿದ್ದು ಈ ಫಲವನ್ನೇ ಹೇಳಬಹುದಾಗಿದೆ.

ಸಾತ್ವಿಕದಲ್ಲಿ ಶುಚಿತೆ ಆಸ್ತಿಕ್ಯ, ಶುಭಮತಿಗಳಿರುವುವವು. ರಾಜಸದಲ್ಲಿ ಬಹುಭಾಷಿತ್ವ, ಮಾನ, ಕ್ರೋಧ, ದಂಭ, ಮತ್ಸರಗಳಿರುವವು. ತಾಮಸ ದಲ್ಲಿ ಭಯ ಅಜ್ಞಾನ ನಿದ್ರೆ ಆಲಸ್ಯ ವಿಷಾದಗಳಿರುತ್ತದೆ. ಕುಂಭ ರಾಶಿಯಾ

ಗಿದ್ದು ಸತ್ವ ರಜ ತಮೋಗುಣ ಗ್ರಹರಲ್ಲಿ ಯಾವನು ಬಲಿಷ್ಠನೆಂದರಿತು ಫಲ ವನ್ನು ಹೇಳಬೇಕು. ಸತ್ವ ರಜತಮೋಗುಣ ವಿಷಯದ ಚಿಂತನೆಯಲ್ಲಿ ಗ್ರಹರೇ ಮುಖ್ಯ. ಆ ಗ್ರಹರಾರು ಎಂಬುದನ್ನು ಈ ಮೊದಲು ಕೊಡಲಾ ಗಿದೆ.

**ಮೀನ**

ಮೀನ ರಾಶಿಯು ರಾಶಿಚಕ್ರದ ಕೊನೆಯ ರಾಶಿ. ಇದು ಹನ್ನೆರಡನೆಯ ರಾಶಿ. ಮುಖ ಪುಚ್ಛ ಪ್ರತಿಬದ್ಧ ಮತ್ಸ್ಯಗಳೆರಡರ ರೂಪವನ್ನು ಈ ರಾಶಿ ಯಲ್ಲಿ ಕಾಣುವೆವು. ಒಂದು ಮೀನಿನ ಬಾಲ ಇನ್ನೊಂದರ ಮುಖದ ಬಳಿಗೂ ಮತ್ತೊಂದರ ಬಾಲ ಮೊದಲನೇ ಮೀನಿನ ಮುಖಕ್ಕೂ ಸೇರಿಕೊಂ ಡಿರುವುದು ಈ ರಾಶಿಯ ಒಡೆಯ ಗುರು. ಮೀನು ಜಲಜೀವಿ. ಜಲಚರ.

ಮೀನು ಜಲಾಶಯಗಳಲ್ಲೆಲ್ಲಾ ಇರುವುದು. ಮೀನುಗಳಲ್ಲಿ ದೊಡ್ಡವೂ ಚಿಕ್ಕವೂ ಇವೆ. ಸಾಗರದ ಮೀನುಗಳು ಬಲಿಷ್ಠಗಳೂ ಮಹತ್ವಗಳೂ ಇರುತ್ತವೆ. ಅಂತೆಯೇ ಈ ರಾಶಿಯವರಲ್ಲಿ ಕಿರಿಯ ಮತ್ತು ಹಿರಿಯ ದೇಹ ದವರನ್ನು ಕಾಣುವೆವು. ದೊಡ್ಡ ಕುಟುಂಬ ಬಡ ಕುಟುಂಬದವರನ್ನೂ ಕಾಣುವೆವು ಮೀನನ್ನು ಮನುಷ್ಯನು ಸಾಕುತ್ತಾನೆ. ಅದರಿಂದ ಉಪ ಯೋಗವನ್ನು ಹೊಂದುತ್ತಾನೆ. ಮಾನವ ಸಮಾಜ ಮೀನನ್ನು ಪೋಷಿಸು ತ್ತಿರುವುದಾದರೂ ಉದ್ದೇಶ ಸಾಧನೆಗಾಗಿಯೇ ಈ ಕೆಲಸವನ್ನು ಮಾಡುತ್ತಿರು ವುದು. ಅಂತೆಯೇ ಈ ರಾಶಿಯವರನ್ನು ಜನರು ತಮ್ಮ ಉದ್ದೇಶ ಸಾಧನೆ ಗಾಗಿ ಪೋಷಿಸಿ ಆ ಮೇಲೆ ಅವರನ್ನು ಬಿಡುವರು. ಮತ್ತು ಹಿಂಸಿಸುವರು. ಮೀನ ರಾಶಿಯವರ ಕುಟುಂಬ ದೊಡ್ಡದು.

ಮೀನು ಸಾಗರದ ಜೀವಿಯಾಗಿದ್ದು ಸಾಗರದ ಗಾಂಭೀರ್ಯ ಮಹತ್ವ ಗಳು ಈ ರಾಶಿಯವರಿಗೆ ಉಂಟಾಗುತ್ತವೆ. ಸಮುದ್ರ ಗನಿಯ ಉತ್ಪತ್ತಿ ಸ್ಥಾನ, ಇದರಿಂದಲೇ ಸಮುದ್ರಕ್ಕೆ ರತ್ನಾಕರವೆಂದು ಕರೆಯುವರು. ಮೀನು ಜಲಾಶ್ರಯ ಜೀವಿ. ನೀರಿನಿಂದ ಹೊರ ತೆಗೆದರೆ ಅದು ಬಾಳದು. ಈ ಕಾರಣದಿಂದಲೇ ಈ ರಾಶಿಯವರಿಗೆ ತಮ್ಮ ನಿವಾಸ, ಮತ್ತು ಊಟ ಉಪ ಚಾರವೇ ಮೊದಲಾದುವುಗಳಲ್ಲಿ ಒಂದೊಂದು ನಿಯಮ ವ್ಯವಸ್ಥೆಯು ಕಂಡು

ಬರುವುದು. ತಮ್ಮ ಆಹಾರ ನಿದ್ರಾದಿ ವಿಚಾರಗಳಲ್ಲಿ ನಿಯಮದ ನೆಲೆ ಬೇಕಾಗುತ್ತದೆ. ತಾವು ಅನುಸರಿಸಿ ಬಂದ ನಿಯಮವನ್ನು ತಪ್ಪಿ ನಡೆದರೆ ಅವರ ಆರೋಗ್ಯಕ್ಕೆ ತಡೆ ಬರುತ್ತದೆ. ಆದ್ದರಿಂದ ಆರೋಗ್ಯ ಜೀವನದಲ್ಲಿ ಮೀನ ರಾಶಿಯವರಿಗೆ ನಿಯಮ ಇದ್ದೇ ಇರಬೇಕಾಗುತ್ತದೆ.

ಮೀನಿನ ಆಹಾರಧೋರಣೆ ಸಾಂಸಾರಿಕ ಜೀವನದೊಡ್ಡದು.ಅಂತೆಯೇ ಈ ರಾಶಿಯವರ ಆಹಾರ ಪ್ರವೃತ್ತಿ, ಕುಟುಂಬ ಪರಿಪಾಲನಾಕ್ರಮ ದೊಡ್ಡದು. ಮೀನ ರಾಶಿಯವರ ಜೀವನದ ತ್ಯಾಗಧರ್ಮದೊಡ್ಡದು. ದೊಡ್ಡ ನೆಲೆ ಕಂಡು ಬರುವುದು. ದೊಡ್ಡ ನೆಲೆಯನ್ನು ಹೊಂದುತ್ತಿರುವರಾದರೂ ಆಶ್ರಿತರಿಂದಲೇ ಹಾನಿಯನ್ನು ಹೊಂದುತ್ತಿರುವರು. ಎಲ್ಲಿ ನೆಲೆಸಿರುವರೋ ಅಲ್ಲಿ ತುಂಬಾ ಸಂಪತ್ತಿನ ನೆಲೆಯುಂಟಾಗುತ್ತಿದೆ. ಉಂಟಾದ ಸಂಪತ್ತು ಅವರ ಸುಖಕ್ಕೆ ಅಂತ್ಯ ಕಾಲದಲ್ಲಿ ಉಪಯೋಗಕ್ಕೆ ಬೀಳದಂತಾಗುತ್ತದೆ. ಬಂಧು ವರ್ಗದವರು ಹೆಚ್ಚಿನ ಸಂಪತ್ತನ್ನು ಹೊಂದುತ್ತಿರುವರು.

ಸೃಷ್ಟಿಯಲ್ಲಿ ಶಾಂತಿಯ ನಂತರ ಕ್ರಾಂತಿ, ನಿಷ್ಕ್ರಿಯತೆಯ ನಂತರ ಸಕ್ರಿಯತಾ ವ್ಯವಹಾರ ನಡೆಯುತ್ತಿರುವುದು. ಒಂದರ ಬಳಿಕ ಇನ್ನೊಂದರ ಪರಿವರ್ತನೆಯಾಗುತ್ತಿರುವುದು. ಅಂತೆಯೇ ಈ ರಾಶಿಯಲ್ಲಿ ಒಂದರ ನಂತರ ಇನ್ನೊಂದರ ಅನ್ವೇಷಣೆ ಕಂಡು ಬರುತ್ತದೆ. ಮಾನವ ಸಮಾಜದಲ್ಲಿ ಒಂದರ ಅನ್ವೇಷಣೆಯ ನಂತರ ಮತ್ತೊಂದರ ಅನ್ವೇಷಣೆಯು ಪ್ರಾಚೀನಕಾಲದಿಂದಲೇ ಆರಂಭಿಸಿದ್ದು ಈ ಅನ್ವೇಷಣಾ ಪ್ರವೃತ್ತಿ ಈ ರಾಶಿಗಿದೆ. ಪಂಚಭೂತಗಳಲ್ಲಿ ತನ್ನ ಅಧಿಕಾರವನ್ನು ನಡೆಸಿ ವಿಜಯವನ್ನು ಗಳಿಸುವ ಪ್ರವೃತ್ತಿಯು ಮಾನವ ನಿಗುಂಟಾಯಿತು. ಆತನು ಕ್ರಮೇಣ ರೇಡಿಯೋ ವಿಮಾನ, ಮೋಟರು, ರೈಲು, ಟೆಲಿಫೋನ್, ಚಿತ್ರಪಟ ಮೊದಲಾದ ನೂತನ ಆವಿಷ್ಕಾರಗಳನ್ನು ಇದರಿಂದ ಸೃಜಿಸಿದನು. ಅಂತೆಯೇ ಮಾನವನು, ಅಣುಶಕ್ತಿ, ಬಾಂಬು, ತೋಪು, ಫಿರಂಗಿ, ಟ್ರೇನುಗನ್ನು, ಸ್ಟೇನುಗನ್ನು, ಮಾರಟಸ್ಸು, ಮೊದಲಾದ ಯುದ್ಧೋಪಕರಣಗಳನ್ನು ಸೃಜಿಸಿದನು. ಈ ರಾಶಿಯಲ್ಲಿ ಪ್ರಲಯದ ಗುಣ ಧರ್ಮ ಇರುವ ಕಾರಣ ಪ್ರಾಚೀನ ವಸ್ತು ಸೃಷ್ಟಿಗಳನ್ನು ಬಿಟ್ಟು ಹೊಸ ವಸ್ತು ಸೃಷ್ಟಿಗಳ ಶಕ್ತಿ ಕಂಡುಬರುವುದು. ಹಿರಿಯರು ಮಾಡಿದ ವ್ಯವಹಾರ

ಬಿಟ್ಟು ಬೇರೆ ವ್ಯವಹಾರವನ್ನು ಹಿಡಿದು ಮೇಲಕ್ಕೆ ಬರುವರು. ಮೀನದ ಸಮಾಜವು ಪ್ರಥಮಕಾಲದಲ್ಲಿ ಯಾವ ನೆಲೆಯಲ್ಲಿದ್ದಿತೋ ಅದೇ ಅವಸ್ಥೆಗೆ ಕೊಂಡೊಯ್ಯುವ ಸ್ವಭಾವವು ಈ ರಾಶಿಗೆ ಇದ್ದೇ ಇದೆ. ಮೀನರಾಶಿಯು ಪ್ರಭಾವ ಜಗತ್ತಿಗೆ ಇದೆ. ಈ ರಾಶಿಗೋಲಾಂತ್ಯವಾದ ರಾಶಿಯಾದ್ದರಿಂದ ಇದು ನಾಲ್ಕನೆ ಕುಟುಂಬ ರಾಶಿ ಮತ್ತು ಅಂತ್ಯರಾಶಿ. ಅಂತ್ಯರಾಶಿಯಾದ ಕಾರಣ ಕೆಲವರಿಗೆ ತಮ್ಮ ಕುಟುಂಬದ ಸುಖಲಾಭವಾಗುವುದಿಲ್ಲ. ಕೆಲವರಿಗೆ ಮಕ್ಕಳ ಸುಖವಿರುವುದಿಲ್ಲ. ಮೀನ ರಾಶಿಯಾದರೆ ಸಾಲದು, ಲಗ್ನವೂ ಮೀನವೇ ಆಗಿ ಪಂಚಮಕ್ಕೆ ಪಾಪ ಗ್ರಹರ ಸಂಪರ್ಕ ಸಂಭವಿಸಿದರೆ ಮಕ್ಕಳ ಸುಖ ಉಂಟಾಗುವುದಿಲ್ಲ.

ಮೀನ ಅಂತ್ಯರಾಶಿಯಾದ್ದರಿಂದ ದಾಂಪತ್ಯದಲ್ಲಿಯೂ ಸುಖಲಾಭ ಕಡಿಮೆಯಾಗುವುದುಂಟು. ಮೀನ ಸ್ತ್ರೀರಾಶಿ. ಯುಗ್ಮರಾಶಿ. ಉಭಯೋದಯ ರಾಶಿ. ಉಭಯೋದಯ ರಾಶಿಯೆಂದು ಬಾಲ ಮುಖಗಳುಳ್ಳ ಮೀನಿನ ಸ್ವರೂಪದಿಂದಲೇ ತಿಳಿಯಬಹುದು. ಮೀನಲಗ್ನದಲ್ಲಿ ಜನನವಾದರೆ ಪ್ರಸವ ಕಾಲ ತಾಯಿಗೆ ಕಷ್ಟವಾಗಿರುವುದು. ಶಿಶುವಿನ ಕಾಲು ತಲೆ ಒಂದಾಗಿ ಹೊರಬಂದರೆ ಪ್ರಸವಕ್ಕೆ ಕಷ್ಟ. ಒಂದು ಮೀನಿನ ಮುಖ ಒಂದೆಡೆ ಮತ್ತೊಂದರ ಮುಖ ಮತ್ತೊಂದೆಡೆ ಇರುವ ದ್ವಂದ್ವ ಸ್ವರೂಪ ಈ ರಾಶಿಗಿರುವುದರಿಂದ ದಾಂಪತ್ಯ ಜೀವನದಲ್ಲಿ ಗಂಡ ಹೆಂಡಿರಲ್ಲೊಬ್ಬರಿಗೆ ದೇಹಾರೋಗ್ಯ ಸರಿಯಿರದಿರುವಿಕೆ ಮೊದಲಾದುವುಗಳಿದ್ದು, ಕಷ್ಟಫಲಾನುಭವವಿರುವುದು. ಆದ್ದರಿಂದ ಮೀನರಾಶಿ ಯಾ ಲಗ್ನದವರಿಗೆ ಮೇಳಾ ಮೇಳಿಯನ್ನು ನೋಡುವಾಗ ಜೋಯಿಸನು ಜಾಗೃತನಾಗಿದ್ದು ಅನುಕೂಲವಾದ ಗ್ರಹ ಸ್ಥಿತಿಯ ಜಾತಕದ ಘಟನೆಯನ್ನು ಮಾಡಬೇಕು.

ಪ್ರಾಚೀನರು ಮೀನ ರಾಶಿಯನ್ನು ದ್ವಿಸ್ವಭಾವ ರಾಶಿ, ಜಲರಾಶಿ, ಫಲ ಪ್ರದ, ಕಫಾತ್ಮಕ, ರಾತ್ರಿ ರಾಶಿ, ಅಭಾವಾತ್ಮಕ ಜಲತತ್ವ, ಬಹುಪ್ರಸವ, ಮಧ್ಯ ದೇಹ, ಉತ್ತರದಿಕ್ಕು, ಕಾಲಿನ ಮೇಲೆ ಪ್ರಭಾವವುಳ್ಳುದು ಎಂದು ಮೊದಲಾಗಿ ಹೇಳುವರು. ಮಾತ್ರವಲ್ಲದೆ, ಸಮರಾಶಿ, ಸ್ತ್ರೀರಾಶಿ, ಸ್ತ್ರೀತತ್ವ, ಸ್ತ್ರೀತ್ವದ ಕೀಟ ರಾಶಿ, ಸತ್ವಗುಣಿ, ಎಂದೂ ಹೇಳಿರುವರು. ನಿವಾಸಸ್ಥಾನ

ಜಲಾಶಯು, ಸಮುದ್ರ ಅಥವಾ ನದೀರಾಶಿ, ಮುಕರಾಶಿ, ದ್ವಿಶರೀರಿ ಎಂದೂ ಹೇಳಿರುವರು. ಪ್ರಧಾನ ತತ್ವಪ್ರೇಮ, ಹೃದಯತತ್ವ, ಏಕತೆ, ಚಂದ್ರ ಕಾಂತರತ್ನ, ಶಾರೀರಿಕ ದೃಶ್ಯ, ಆರ್ದ್ರತೆ, ಅಂತರ್ಜ್ಞಾನ ಮಾನಸಿಕ ದೃಶ್ಯ, ಮೂಲ ಸ್ವಭಾವ, ಪಾರಮಾರ್ಥಿಕ. ರಾಶಿಯ ಮುಖ್ಯ ತತ್ವ, ಪಾರಮಾರ್ಥಿಕ ವಿಚಾರಾಸಕ್ತಿ.

ಈ ಲಗ್ನದವರ ಸ್ವಭಾವ ಸಾಗರದಂತೆ ಗಂಭೀರವಾಗಿರುವುದು. ಸಮುದ್ರ ಹೊರಗೆ ಚಂಚಲವಾದ ತೆರೆಗಳಿಂದ ಕೂಡಿರುವುದು. ಒಳಗೆ ಪ್ರಶಾಂತತೆಯಿಂದಲೂ ಗಂಭೀರತೆಯಿಂದಲೂ ಸ್ಥೈರ್ಯದಿಂದಲೂ ಕೂಡಿರುವುದು. ಈ ರಾಶಿಯವರು ವಿಶ್ವಾಸಕ್ಕೆ ಯೋಗ್ಯರಾಗಿರುವರು. ಭಕ್ತಿಯಿಂದ ಕೂಡಿದವರೂ ಗುರುಜನರಲ್ಲಿ ಶ್ರದ್ಧಾಯುಕ್ತರೂ ಆಗಿರುವರು. ಈ ರಾಶಿಯವರಲ್ಲಿ ಎರಡು ವಿಧದ ಜನರಿರುವರು. ಆಜೀವ ಅವಿವಾಹಿತರೂ, ವಿಷಯಸುಖಾಸಕ್ತಿ ಇದ್ದರಿಂದ ಕೆಲವರಿಗಿರುವುದಿಲ್ಲ. ವ್ಯಸನಾಧೀನರು ಇನ್ನೊಂದು ಬಗೆಯವರು. ಯಾವುದಾದರೂ ವಿಚಾರದಲ್ಲಿ ಆಸಕ್ತಿಗೊಂಡು ಇಂತಹರಿರುವರು. ಈ ಕಾರಣದಿಂದ ಕೆಲವರು ಯೋಗಿಗಳಾಗುವರು. ಈ ರಾಶಿಯಲ್ಲಿ ಅನಾಸಕ್ತಿಯೋಗವಿರುವ ಕಾರಣ ಕಾವ್ಯ, ಗಾಯನ ಯೋಗಾದಿಗಳಲ್ಲಿ ಅಂತಸ್ಫೂರ್ತಿಯುಳ್ಳ ವಿಚಾರಗಳಲ್ಲಿ ಖಾರಂಗತರಾಗುವಿಕೆ ಕಾಣುವುದು.

ಕುಂಭ ಪತಿ ಮಕರ ಪತ್ನಿ ಮೀನ ಪುತ್ರಿ ಈ ರೀತಿಯಿಂದ ಈ ರಾಶಿ ಚಕ್ರದಲ್ಲಿ ನಾಲ್ಕನೇ ಕುಟುಂಬ. ಈ ಪ್ರಪಂಚವು ರಾಶಿಚಕ್ರದ ನಾಲ್ಕು ಕುಟುಂಬಗಳಿಂದ ಕೂಡಿದೆ. ನಾಲ್ಕು ಕುಟುಂಬಗಳ ನಾಟ್ಯ ಪ್ರಪಂಚದಲ್ಲಿ ನಡೆಯುತ್ತಿರುವುದು. ನಾಲ್ಕು ಗೋಲಪಾದಗಳುಳ್ಳದ್ದರಿಂದ ನಾಲ್ಕು ಕುಟುಂಬವೆನ್ನಲಾಗಿದೆ. ಈ ನಾಲ್ಕು ಕುಟುಂಬಗಳಲ್ಲಿ ಕರ್ಕಟಕ, ವೃಶ್ಚಿಕ, ಧನು, ಮೀನ ರಾಶಿಯವರು ವೇದಾಂತ, ಯೋಗ ಮಾರ್ಗ, ಭಕ್ತಿಮಾರ್ಗ ಮತ್ತು ಮೋಕ್ಷ ಮಾರ್ಗಕ್ಕೆ ಅರ್ಹರಾಗಿರುವರು.

ಪುರಾಣಗಳಲ್ಲಿ ಮೀನ ರಾಶಿಯ ವಿಚಾರದಲ್ಲಿ "ನೀರಿನಿಂದ ತುಂಬಿದ ನದಿ ಹರಿಯುತಿತ್ತು. ಒಬ್ಬ ರಾಕ್ಷಸನ ತಲೆ ನೀರಿನಲ್ಲಿ ಹರಿಯುತಿತ್ತು.

ಅದು ನನಗೆ ನೀರನ್ನು ಕೊಡು. ತಿನ್ನಕೊಡು ಎನ್ನುತಿತ್ತು. ನೀರನ್ನು ಕೊಡಲೂ ತಿನ್ನಕೊಡಲೂ ಸಮೀಪಕ್ಕೆ ಹೋಗಲು ಅದು, ಮಾಯವಾಯಿತು. ನದಿಯು ನೀರು ಇಲ್ಲದಾಗಿ ಒಣ ಪ್ರದೇಶ ಕಂಡಿತು." ಎಂದು ವರ್ಣಿಸಿದ ಕತೆಯನ್ನು ಕಾಣುವೆವು. ಇದಕ್ಕೆ ವೇದಾಂತ ದೃಷ್ಟಿಯ ಅರ್ಥವೇನೆಂದು ವಾಚಕರು ತಿಳಿಯಬಹುದು. ಪ್ರಪಂಚ ರಾಕ್ಷಸಮಯ. ಅದನ್ನು ಹಿಡಿಯ ಹೋದರೆ ಆವುದನ್ನೂ ಹೊಂದಲಾರೆವು ಎಂಬುದೂ ಇದರಿಂದ ತೋರುತ್ತಿರುವುದು.

ಮೀನ ಲಗ್ನದ ಸತ್ವಗುಣಿಗಳು ಧಾರ್ಮಿಕರೂ ಪರೋಪಕಾರಿಗಳೂ ಸಾತ್ವಿಕರೂ ದಯಾಳುಗಳೂ ಉದಾರಿಗಳೂ ಬುದ್ಧಿವಂತರೂ, ಸತ್ಯಾಭಿಮಾನಿಗಳೂ, ಪಕ್ಷ ಪ್ರತಿಪಕ್ಷಗಳ ವಿಚಾರವನ್ನು ತಿಳಿಯುವವರೂ, ಲೋಕ ಹಿತಕ್ಕಾಗಿ ಕಷ್ಟಗೊಳ್ಳುವವರೂ ಆಗಿರುವರು. ಸಾಧುಸಜ್ಜನರ ಗುಣಧರ್ಮಗಳಿರುತ್ತವೆ.

ರಜೋಗುಣಿಗಳು ಬುದ್ಧಿವಂತರೂ, ಪರೋಪಕಾರಿಗಳೂ, ನ್ಯಾಯಾನ್ಯಾಯಗಳಲ್ಲಿ ಪಾರಂಗತರೂ, ಅನ್ಯರಿಗೆ ಲಾಭವನ್ನುಂಟು ಮಾಡುವವರೂ, ಕಾವ್ಯ, ಗಾಯನ, ನಾಟಕ, ಸಿನೆಮಾದಿಗಳಲ್ಲಿ ಆಸಕ್ತಿಯುಳ್ಳವರೂ, ಹೆಂಡತಿ ಮಕ್ಕಳನ್ನು ಪ್ರೀತಿಸುವವರೂ ಆಗಿರುವರು. ಅನ್ಯರಲ್ಲಿ ಪ್ರೇಮವನ್ನು ತೋರುತಿದ್ದು ವ್ಯಾಪಾರಾದಿ ಉದ್ಯೋಗಗಳಲ್ಲಿ ಆಸಕ್ತಿ ಇರುವುದು. ಕೆಲವರು ವೈದ್ಯರಾಗುವರು.

ತಮೋಗುಣಿಗಳು ವಿಶ್ವಾಸಾರ್ಹರಲ್ಲ ಅತಿಚಂಚಲರೂ, ಅಸ್ಥಿರ ಬುದ್ಧಿಯವರೂ ಏಕಾಂತಪ್ರಿಯರೂ ಆಗುವರು. ಯಾರೊಡನೆಯೂ ಅಂಟಿಕೊಳ್ಳುವುದಿಲ್ಲ. ಸತ್ವ ರಜ ತಮೋ ಗುಣಗಳನ್ನು ಗ್ರಹರ ಸಂಪರ್ಕದಿಂದ ತಿಳಿಯಬೇಕಿದೆ. ಈ ವಿಚಾರವನ್ನು ಈ ಮೊದಲೇ ಕೊಡಲಾಗಿದೆ.

**ಗುಣಧರ್ಮ**

ಪ್ರತಿ ರಾಶಿಗೂ ಸತ್ವ ರಜ ತಮ ಗುಣಗಳಿರುತ್ತವೆ. ಸತ್ವ ರಜ ತಮ ಗುಣಗಳನ್ನು ಗ್ರಹರಿಂದಲೇ ನಿರ್ಣಯಿಸಬೇಕಿದೆ. ಚಂದ್ರ, ಸೂರ್ಯ, ಗುರುಗಳು ಸತ್ವಗುಣಕಾರಕರು. ಬುಧ ಶುಕ್ರರು ರಜೋಗುಣಕಾರಕರು. ಕುಜ

ಶನಿಗಳು ತಮೋ ಗುಣಕಾರಕರು. ಈ ಕಾರಕ ಗ್ರಹರ ಸಂಯೋಗ ದೃಷ್ಟಿ ಗಳಿಂದ ಗುಣ ಧರ್ಮವನ್ನು ಕಂಡು ಕೊಳ್ಳಬೇಕು.

ಸತ್ವ ರಜ ತಮವೆಂದು ಮೊತ್ತ ಮೊದಲು ಮೂರಾಗಿ ವಿಂಗಡಿಸಿದರೂ ಸತ್ವಗುಣ ಈಶ್ವರೀ ದೈವೀ ಎಂಬ ಎರಡು ಭೇದಗಳಿಂದ ಕೂಡಿರುವುದು. ರಜದಲ್ಲಿ ಮಾನವೀ ಪೈಶಾಚೀ ಎಂಬ ಭೇದಗಳಿವೆ. ತಮದಲ್ಲಿ ಭೇದವಿಲ್ಲ.

ಮೇಷಾದಿ ರಾಶಿಗಳಿಗೆ ಪಾಶ್ಚಾತ್ಯರು ಬೇರೆ ನಾಮಕರಣ ಮಾಡಿರುವರು. ಮೇಷವನ್ನು Aries ಎಂದೂ ವೇದಾಂತಿಗಳು ಅವಿದ್ಯಾ ರಾಶಿಯೆಂದೂ ಹೇಳುವರು. ವೃಷಭ Taurus ಎಂದೂ ಸಂಸ್ಕಾರ ರಾಶಿಯೆಂದೂ ಹೇಳಲಾಗುವುದು. ಮಿಥುನ Gemini ಎಂದೂ ವಿಜ್ಞಾನ ರಾಶಿಯೆಂದೂ ಹೇಳಲಾಗುವುದು ಕರ್ಕಟಕ Cancer ಎಂದೂ ನಾಮರೂಪ ರಾಶಿಯೆಂದೂ ಹೇಳಲಾಗುವುದು. ಸಿಂಹವನ್ನು Leo ಸದಾಯತನ ರಾಶಿಯೆಂದೂ ಹೇಳುವರು. ಕನ್ಯೆಯನ್ನು Virgo ಸ್ಪರ್ಶರಾಶಿಯೆಂದೂ ಹೇಳುತ್ತಿರುವರು. ತುಲಾ ರಾಶಿಯನ್ನು Libra ಎಂದೂ ವೇದನಾ ರಾಶಿಯೆಂದೂ ಹೇಳುತ್ತಿರುವರು. ವೃಶ್ಚಿಕ ರಾಶಿಯನ್ನು Scorpio ಎಂದೂ ತೃಷ್ಣಾ ರಾಶಿಯೆಂದೂ ಹೇಳುವರು. ಧನುವನ್ನು Sagittarius ಎಂದೂ ಉಪಾದಾನ ರಾಶಿಯೆಂದೂ ಹೇಳುತ್ತಿರುವರು ಮಕರವನ್ನು Capricorn ಎಂದೂ ಭಾವರಾಶಿಯೆಂದೂ ಹೇಳುವರು. ಕುಂಭವನ್ನು Aquarius ಎಂದೂ ಯತಿರಾಶಿಯೆಂದೂ ಹೇಳುವರು. ಮೀನವನ್ನು pises ಎಂದೂ ಜರಾಮರಣ ರಾಶಿಯೆಂದೂ ಹೇಳುವರು. ವೇದಾಂತಿಗಳು ಮೇಷಾದಿ ರಾಶಿಗಳಿಗೆ ಯಾವ ನಾಮಕರಣವನ್ನು ಮಾಡಿರುರೆಂಬುದೂ ಸತ್ವ ರಜ ತಮ ಗುಣ ಚಿಂತನೆಯಲ್ಲಿ ಅಗತ್ಯವಿದೆ.

ಈಶ್ವರೀ ಗುಣಧರ್ಮ ಅಸಾಮಾನ್ಯವಾದುದು. ಈಶ್ವರೀ ಗುಣದಲ್ಲಿ ವಿಭೂತಿತ್ವದ ಅಂಶ ಅಧಿಕವಿರುತ್ತದೆ. ಜನರು ಈ ಗುಣವುಳ್ಳವರನ್ನು ಅವತಾರ ಪುರುಷರೆಂದು ತಿಳಿಯುತ್ತಾರೆ. ಈ ಗುಣವನ್ನು ಸಾಧುಗಳಲ್ಲಿಯೂ ಸತ್ಪುರುಷರಲ್ಲೂ ಕಾಣುವೆವು.

ದೈವೀ ಗುಣಧರ್ಮಕ್ಕೆ ಈಶ್ವರೀಯ ಗುಣಧರ್ಮದಷ್ಟು ಮಹತ್ವ

ವಿಲ್ಲ. ಇಂತಹವರಲ್ಲಿ ದೇವಾಂಶವು ಅಧಿಕವಿರುವುದು. ಸಾಧಾರಣ ಮನುಷ್ಯರಂತೆ ನಡೆದು ಕೊಳ್ಳುವರು.

ರಜೋ ಗುಣದ ಮಾನವೀ ಧರ್ಮದವರನ್ನು ಜನ ಸಮುದಾಯದಲ್ಲಿ ಅಧಿಕವಾಗಿ ಕಾಣಬಹುದು. ಇಂತಹವರು ಸಂಸಾರ ಮಗ್ನರಾಗಿ ಕೆಲಸದಲ್ಲಿ ಸದಾ ದತ್ತಚಿತ್ತರಾಗಿ ಜೀವನವನ್ನು ಕಳೆಯುತ್ತಿರುವರು. ಜೀವನಾಂತ್ಯದವರೆಗೂ ಈಶ್ವರೀಯ ಮಾರ್ಗವನ್ನು ಹುಡುಕುವ ಅಭಿಲಾಷಾಯುಕ್ತರಾಗಿರುವರು.

ಪೈಶಾಚಿಕ ವೃತ್ತಿಯ ಗುಣಧರ್ಮದವರನ್ನು ಅವರು ಯಾವುದಕ್ಕೆ ಜನ್ಮವೆತ್ತಿದರೆಂದು ಯಾರಿಗೂ ನಿರ್ಣಯಿಸಲಾಗುವುದಿಲ್ಲ. ಜೀವನದಲ್ಲಿ ಹುಟ್ಟಿನಿಂದ ಕೊನೆಯ ವರೆಗೂ ಕಷ್ಟವನ್ನೇ ಹೊಂದುತ್ತಿರುವರು.

ಆಸುರೀ ಗುಣಧರ್ಮದವರು ತಾಮಸೀ ವೃತ್ತಿಯವರು. ಇವರು ಸಾಧು ಸಜ್ಜನರಿಗೆ ಕಷ್ಟವನ್ನುಂಟು ಮಾಡುತ್ತಿರುವರು. ಇಂತಹವರನ್ನು ಲೋಕದಲ್ಲಿ ತುಂಬಾ ಕಾಣಬಹುದು. ಪಾಶ್ಚಾತ್ಯ ರಾಷ್ಟ್ರವೃತ್ತಿ ಮತ್ತು ಪಾಶ್ಚಾತ್ಯ ಸಂಸ್ಕೃತಿ ಇಂತಹದೆಂದು ಪೂರ್ವೀಯರ ಮತ. ಲೋಕದಲ್ಲಿ ಈಶ್ವರೀಯ ಗುಣಧರ್ಮವನ್ನು ಬಿಟ್ಟು, ಆಸುರೀ, ದೈವೀ, ಮಾನವೀ ಮತ್ತು ಪೈಶಾಚಿಕ ಸ್ವಭಾವದ ಗುಣಧರ್ಮದವರನ್ನು ಯಥಾ ಕ್ರಮವಾಗಿ ಸಂಖ್ಯೆಯ ಆಧಿಕ್ಯತೆಯಿಂದ ಕಾಣಬಹುದು. ಈಶ್ವರೀ ಗುಣಧರ್ಮವಾವುದೆಂಬುದನ್ನು ಶ್ರೀ ಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಬೋಧಿಸಿರುವನು.

“ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ ।
ನಿರ್ಮಮೋ ನಿರಹಂಕಾರಃ ಸಮದುಃಖ ಸುಖಕ್ಷಮೀ ।
ಸಂತುಷ್ಟಃ ಸತತಂಯೋಗೀ ಯತಾತ್ಮಾದೃಢ ನಿಶ್ಚಯಃ ।
ಮಯ್ಯರ್ಪಿತ ಮನೋ ಬುದ್ಧಿಃ ಮದ್ಭಕ್ತಃ ಸಮೇ ಪ್ರಿಯಃ ।
ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಜ್ಞಾನ ವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇಯೋಗೀ ಸಮಲೋಷ್ಟಾತ್ಮ ಕಾಂಚನಃ ॥

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ॥

ಎಲ್ಲಾ ಭೂತಗಳಲ್ಲಿಯೂ ದ್ವೇಷಿಸದವನೂ, ಸ್ನೇಹ ಕರುಣೆಗಳಿಂದ ಕೂಡಿದವನ್ನೂ, ಮಮತ್ವ, ಅಹಂಕಾರಗಳಿಲ್ಲದವನೂ, ದುಃಖ ಸುಖಗಳಲ್ಲಿ ಸಮತ್ವವುಳ್ಳವನೂ, ಕ್ಷಮಾಗುಣವಂತನೂ, ಸದಾ ಸಂತುಷ್ಟನೂ ಯಾವಾಗಲೂ ಧ್ಯಾನಯೋಗಯುಕ್ತನೂ, ಇಂದ್ರಿಯನಿಗ್ರಹ ಗೊಂಡವನೂ, ದೃಢ ನಿಶ್ಚಯಯುಕ್ತನೂ, ನನ್ನಲ್ಲಿರಿಸಿದ ಮನೋಬುದ್ಧಿಯುಳ್ಳವನೂ ಆಗಿ ಯಾವನಿರುವನೋ ಮತ್ತು ಯಾವನ ಅಂತಃಕರಣ ಪ್ರವೃತ್ತಿಗಳು ಶಾಂತಿ ಯಿಂದ ತುಂಬಿದ್ದು ವಿಕಾರರಹಿತವಾಗಿರುವವೋ ಅಂತಹ ಆತ್ಮದಿಂದ ಕೂಡಿದ ಪುರುಷನ ಜ್ಞಾನದಲ್ಲಿ ಸಚ್ಚಿದಾನಂದ ರೂಪನಾದ ಪರಮಾತ್ಮನು ಚೆನ್ನಾಗಿ ನೆಲಸಿರುವನು. ಅವನ ಅಂತಃಕರಣವು ಜ್ಞಾನ ವಿಜ್ಞಾನಗಳಿಂದ ತೃಪ್ತವಾಗಿರುವುದು. ಆತ್ಮದ ಸ್ಥಿತಿ ನಿರ್ವಿಕಾರವಾಗಿರುವುದು. ಆತನ ಇಂದ್ರಿಯ ಚಿನ್ನ, ಮಣ್ಣು, ಕಲ್ಲುಗಳಲ್ಲಿ ಸಮಾನತೆಯಿಂದ ಕೂಡಿರುವುದು. ಇಂತಹ ಮನುಷ್ಯನು ಸುಹೃತ್, ಮಿತ್ರ, ಶತ್ರು, ಉದಾಸೀನ, ದ್ವೇಷಿ(ಹಗೆ), ಬಂಧುಗಣ ಮತ್ತು ಧರ್ಮಾತ್ಮ, ಪಾಪಿಗಳಲ್ಲಿ ಸಮಾನಭಾವದಿಂದ ಕೂಡಿದ ವನಾಗಿರುವನು. ಆತನು ಅತಿ ಶ್ರೇಷ್ಠನು. ಇಂತಹ ಮನುಷ್ಯನಿಂದ ಜೀವಲೋಕ ಉದ್ವೇಗ ಗೊಳ್ಳುವುದಿಲ್ಲ. ಸಂತೋಷ, ಕ್ರೋಧ, ಭಯ, ಉದ್ವೇಗಗಳಿಂದ ಲೋಕ ವಿಮುಕ್ತವಾಗಿರುವುದು. ಯಾವೊಂದು ವಿಷಯ ದಲ್ಲಿಯೂ ಅಪೇಕ್ಷೆಗೊಳ್ಳದವನೂ, ಅಂತರಂಗ ಬಹಿರಂಗಗಳಿಂದ ಶುದ್ಧನೂ, ಚತುರನೂ, ಯಾವೊಂದು ವಿಷಯದಲ್ಲಿಯೂ ಪಕ್ಷಪಾತಗೊಳ್ಳದವನೂ, ದುಃಖವಿರದವನೂ, ತ್ರಿಕರಣದಿಂದ ಪ್ರಾರಬ್ಧ ಮೂಲಕ ಉಂಟಾಗುವ ಸ್ವಾಭಾವಿಕ ಕರ್ಮಗಳನ್ನು ತ್ಯಾಗಗೊಳ್ಳುವವನೂ ಆದವನೇ ತ್ಯಾಗಿಯು.

ಶತ್ರು ಮಿತ್ರರಲ್ಲಿ ಮತ್ತು ಮಾನಾಪಮಾನಗಳಲ್ಲಿ ಸಮಭಾವನೆಯಿಂದ ಕೂಡಿದವನೂ ಅಂತೆಯೇ ಶೀತ, ಉಷ್ಣ, ಸುಖ ದುಃಖಾದಿ ದ್ವಂದ್ವಗಳಲ್ಲಿ ಸಮತ್ವವುಳ್ಳವನೂ, ಸಾಂಸಾರಿಕ ಆಸಕ್ತಿರಹಿತನೂ ನಿಂದೆ ಸ್ತುತಿಗಳೆರಡನ್ನೂ ಸಮಾನತೆಗೊಳ್ಳುವವನೂ, ಮಾನಶೀಲನೂ, ತನ್ನ ಸ್ಥಾನದಲ್ಲಿ ಮಮತೆಯಿರ

ದವನೂ ಆದವನು ಸ್ಥಿತಪ್ರಜ್ಞನೆನಿಸುವನು.

ಕಾಯಾ, ವಾಚಾ, ಮನಸಾ, ಯಾರಿಗೂ ಹಿಂಸಿಸದವನೂ, ಸತ್ಯವಂತನೂ, ಚೋರತನಗೊಳ್ಳದವನೂ, ಪರದ್ರವ್ಯ, ಸ್ತ್ರೀ ಮೊದಲಾದವುಗಳಲ್ಲಿ ಅಭಿಲಾಷೆಗೊಳ್ಳದವನೂ, ಬ್ರಹ್ಮಚರ್ಯದಿಂದ ಕೂಡಿದವನೂ, ಜೀವನದಲ್ಲಿ ಯಾವ ವಸ್ತುವಿನ ಅವಶ್ಯಕತೆ ಗೊಳ್ಳದವನೂ, ಎಷ್ಟು ಕಷ್ಟಗಳನ್ನು ಅನುಭವಿಸಿದರೂ ಬೇರೆಯವರ ಕಲ್ಯಾಣವನ್ನೇ ಮಾಡುತ್ತಿದ್ದರೆ ಆತನೇ ಈಶ್ವರೀ ಗುಣಧರ್ಮಯುಕ್ತನಾಗುವನು. ಇಂತೆಯೇ ಗುಣಧರ್ಮ ವಿಚಾರ ಗೀತೆಯಲ್ಲಿದೆ.

## ತನು ಭಾವದ ಚಂದ್ರ

ನಮ್ಮ ಪ್ರಾಚೀನ ಗ್ರಂಥಕಾರರು ಹೇಳಿದ ಮತ್ತು ಪಾಶ್ಚಾತ್ಯರ ಮತಗಳನ್ನು ಮೊದಲು ಇಲ್ಲಿ ಕ್ರೋಢೀಕರಿಸಿ ಜನರ ಮುಂದಿಟ್ಟು ಅನುಭವ ವಿಷಯ ಸಮೀಕ್ಷೆಗೊಳಿಸಲಾಗುವುದು.

> ಪೂರ್ಣೇ ಶೀತಕರೇಲಗ್ನೇ ಸುರೂಪೋ ಧನವಾನ್ಭವೇತ್ ।
> ಅಸಂಪೂರ್ಣೇತಿ ಮಲಿನೋಮಂದವೀರ್ಯೋಭವೇತ್ಸದಾ ।
> ಗೋಮೇಷಕರ್ಕಟೀಲಗ್ನೇ ಚಂದ್ರಸ್ಸೇ ರೂಪವಾನ್ ಧನೀ ।
> ಜಡತಾವ್ಯಾಧಿದಾರಿದ್ರ್ಯಂ ಶೇಷರ್ಕ್ಷೇ ಕುರುತೇ ಶಶೀ ॥
> ಶ್ವಾಸಕಾಸೋಹಿಜಾತಸ್ಯ ತನೌ ವಾತ ಭ್ರಮೋಭವೇತ್ ।
> ಅಶ್ವಾದಿಪಶುಘಾತಶ್ಚ ಹೃದಯೇ ರಾಜಚೌರತಃ ॥ (ಗರ್ಗ)

ಲಗ್ನದಲ್ಲಿ ಪೂರ್ಣಮಾ ಚಂದ್ರನು ಇದ್ದಲ್ಲಿ ಉತ್ತಮ ರೂಪ ಸ್ಥಿತಿ ಧನಿಕತೆ ಮೃದುತ್ವದ ದೇಹ ಕಂಡು ಬರುವುದು. ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿ ಚಂದ್ರ ಅಷ್ಟಮಿಯವರೆಗಿನವನು ಅಸಂಪೂರ್ಣಚಂದ್ರ. ಈ ಚಂದ್ರ ಮಲಿನತೆ ಮಂದವೀರ್ಯದಾಯಕನಾಗಿ ಯಾವಾಗಲೂ ಭವಿಸುವನು. ವೃಷಭ ಮೇಷ ಕರ್ಕಟಕ-ಲಗ್ನವಾಗಿ ಚಂದ್ರನು ಇದ್ದರೆ ರೂಪವಂತನೂ ಧನಿಕನೂ ಆಗುವನು. ಉಳಿದರಾಶಿಗಳ ಚಂದ್ರ ಜಡತೆ ರೋಗ ಬಡತನ ಕೊಡುವನು. ದೇಹದಲ್ಲಿ ಶ್ವಾಸಕಾಸ ವಾತ ವಿಕಾರ ಭ್ರಮೆ ರೋಗಗಳೂ ಬರುವವು. ಕುದುರೆ ಮೊದಲಾದವನ್ನು ಸಾಕುತ್ತಿರುವನು, ಇವುಗಳ ಅಭಿಘಾತ ಚಿಹ್ನೆ

ಹೃದಯದ ಭಾಗವುವ, ರಾಜಕೋರನಾಗುವನು.

ದಾಕ್ಷಿಣ್ಯ ರೂಪಧನ ಭೋಗಗುಣೈಃ ಪ್ರಧಾನ:ಚಂದ್ರೇಕುಳೀರ ವೃಷಭಾಜಗತೇ ವಿಲಗ್ನೇ ।
ಉನ್ಮತ್ತನೀಚಬಧಿರೋವಿಕಲಶ್ಚ ಮೂಕಶ್ಶೇಷೇ ನರೋಭವತಿ ಕೃಷ್ಣತನುರ್ವಿಶೇಷಾತ್ ॥
(ಕಲ್ಯಾಣವರ್ಮಾ)

ಚಂದ್ರನು ಕರ್ಕಟಕ ವೃಷಭ ಮೇಷಗಳಲ್ಲಿ ಲಗ್ನಗತನಾಗಿರುವನಾದರೆ ದಯಾ ದಾಕ್ಷಿಣ್ಯ, ಚತುರತೆ, ಸುಂದರ, ಧನಿಕ, ಗುಣವಂತನಾಗಿರುವನು. ರಾಜನತ್ತ್ವೆ ಯಾ ಅಸ್ಯ ಅಧಿಕಾರ ಗೋಂಡು ಪ್ರಧಾನ ಪುರುಷನಾಗಿ ಈ ಮೊದಲು ಹೇಳಿದ ದಾಕ್ಷಿಣ್ಯಾದಿ ಗುಣಗಳಿಂದ ನೆಲಸುವನು. ಅನ್ಯರಾಶಿಗತನಾದ ಚಂದ್ರನು ಲಗ್ನಗತನಾಗಿರುವನಾದರೆ ಉನ್ಮತ್ತ ನೀಚ ಬಧಿರ ಅಂಗವಿಕಲತೆ ಮೂಕತೆ ಕಪ್ಪೇರಿದ ದೇಹ ಬಣ್ಣ ಗೊಳ್ಳುವವನಾಗುವನೆಂದು ಈ ಸಾರ.

ಲಗ್ನೇ ಚಂದ್ರೇ ಜಡ: ಶುದ್ಧ: ಪ್ರಸನ್ನೋ ಧನಪೂರಿತ:
ಸ್ತ್ರೀವಲ್ಲಭೋಧಾರ್ಮಿಕಶ್ಚ ಕೃತಘ್ನಶ್ಚ ನರೋಭವೇತ್ ॥ (ಲಗ್ನಚಂದ್ರಿಕಾ)

ಲಗ್ನದಲ್ಲಿ ಚಂದ್ರನು ಇರುವನಾದರೆ ಆಲಸ್ಯ ಭರಿತ, ಪವಿತ್ರ, ಸಂತುಷ್ಟ ಧನಿಕ, ಸ್ತ್ರೀಪ್ರಿಯ ಧಾರ್ಮಿಕ ಕೃತಘ್ನನಾಗುವನು.

ಲಗ್ನಗತಶ್ಚ ವಿಧು: ರೋಗಂ ಸಪ್ತವಿಂಶತಿವತ್ಸರೇ

ಲಗ್ನದಲ್ಲಿರುವ ಚಂದ್ರನಿಂದ ಇಪ್ಪತ್ತೇಳನೇ ವರುಷದಲ್ಲಿ ರೋಗ ಪ್ರಾಪ್ತಿಯಾಗುವುದು.

ಲಗ್ನೇ ಚಂದ್ರೇ ಕ್ರೂರಯುಕ್ತೇ ಶೀತರುಜಾನ್ವಿತಃ ಸ್ಯಾತ್ । (ಪುಂಜರಾಜ)

ಲಗ್ನದಲ್ಲಿ ಚಂದ್ರ ಪಾಪಗ್ರಹಯುತನಾಗಿ ಇದ್ದರೆ ಶೀತ ರೋಗದಿಂದ ಕೂಡಿದವನಾಗಿರುವನು.

ಲಗ್ನದಲ್ಲಿ ಬಲಿಷ್ಠನಾದ ಚಂದ್ರನು ಇದ್ದರೆ ಅತ ಮಹಾಚತುರ ಇಲ್ಲವೆ ಮಹಾ ಮುಂದಾಳು. ಸ್ತ್ರೀ ವಿಯೋಗಸಹನೆ ಗೊಳ್ಳುವನು. ಸ್ತ್ರೀ ಸಮಾಜದಲ್ಲಿ ಗೌರವ ಮಾನ ಸನ್ಮಾನಗಳಾಗುವವು. ಪರಾಕ್ರಮಿ ಯಾ ರಾಜ ವೈಭವ ಭೋಗ ಹೊಂದುವವನು ಎಂದು ಯವನ ಮತ.

ಪಾಶ್ಚಾತ್ಯರು ಲಗ್ನದಲ್ಲಿ ಚಂದ್ರನಿದ್ದರೆ ಅಲ್ಲಿ ಇಲ್ಲಿ ಸುತ್ತಾಡುವವ. ತಿರುಗಾಟದಲ್ಲಿ ಆಸಕ್ತ. ಚಂದ್ರ ಚರರಾಶಿ ಅಥವಾ ಉಭಯ ರಾಶಿಗತ ನಾದರೆ ಈ ಗುಣ ವಿಶೇಷಗೊಳ್ಳುವನು. ಪ್ರವಾಸಿ, ಅಸ್ಥಿರ ಬುದ್ಧಿ, ಸ್ತ್ರೀ ಸ್ವಭಾವಿ, ವಿಲಾಸಿ ಶಾಂತ, ಮಿತ್ರವತ್ಸಲ, ದಯಾಳು, ಸಮಾಜದಲ್ಲಿ ಬೆರೆತು ಅಂಟಿದಿರುವ ಮಾತುಗಾರ, ಮೋಹಕ, ಸ್ತ್ರೀ ಪ್ರಿಯ, ಮಿತ್ರಜನಯುಕ್ತನೂ ಉದಾರಿಯೂ ಸಜ್ಜನನೆನಿಸುವನು. ಸಾರ್ವಜನಿಕ ಹಿತಾಸಕ್ತಿ ಇರುವುದು. ಸಾಮಾನ್ಯರ ಬಹುಜನ ಸಮೂಹದಲ್ಲಿ ವಿಶೇಷತಃ ನೀಚಜನರಲ್ಲಿ ಚೆನ್ನಾಗಿ ಮಾನ್ಯತೆ ಹೊಂದುವನು. ಅಗ್ನಿರಾಶಿಯ ಚಂದ್ರನಾದರೆ ಅತ್ಯಂತ ದೃಢ ಸಾಹಸಿ, ಮಹತ್ವಾಕಾಂಕ್ಷಿ. ಮೇಷರಾಶಿಯ ಚಂದ್ರನಾದರೆ ಅಭಿಮಾನ ದೃಷ್ಟಿ ಮಹತ್ವಿಕೆಯ ಚಿಂತಕ ಅಸ್ಥಿರ ವರ್ತನೆಯುವ. ಈ ಚಂದ್ರಹರ್ಷಲನ ದೃಷ್ಟಿ ಗೊಂಡಿರುವನಾದರೆ ಒಂದೇ ಕಡೆಯಲ್ಲಿ ಸ್ಥಿರವಾಗಿರದವ. ಈ ಚಂದ್ರ ಉದಿತಭಾಗ, ಅನುದಿತಭಾಗ, ಸಂಪರ್ಕ ಲಗ್ನದಿಂದ ಹೊಂದಿದ್ದರೂ ದೊಡ್ಡ ವ್ಯಸನಾಯ ಗೊಂಡಿರುವಿಕೆಯಾಗುವುದು. ಈ ಚಂದ್ರ ಮಕರ ವೃಶ್ಚಿಕ ಸಂಪರ್ಕದವ ಚೆನ್ನಲ್ಲ. ಅವನು ಯಾವುದಾದರೂ ಚಾಳಿ ಹೊಂದಿರುವನು. ನೀಚ ಜನರೊಂದು ಗೂಡಿರುವನು. ಧೂರ್ತ, ಬೀಭತ್ಸ ಶಬ್ದದ ಮಾತಿನವ. ಉಬ್ಬಾಳು ಒರಟುತನದವ ಕುಡುಕತನದವರೂ ಕಾಣುವರು. ಈ ಚಂದ್ರ ಇತರ ಗ್ರಹರ ಅಶುಭಯೋಗ ಗೊಂಡಿರುವನಾದರೆ ಈ ಎಲ್ಲಾ ವರ್ತನೆಗಳಲ್ಲಿ ಅತಿರೇಕತೆ ಹೊಂದಿರುವನು. ಶುಭ ಗ್ರಹಯೋಗ ಸಂಬಂಧಿತನಾದರೆ ಈ ಎಲ್ಲಾ ವರ್ತನೆಗಳಲ್ಲಿ ಸೌಮ್ಯತೆ ಹೊಂದಿರುವನು. ಮಿಥುನ ತುಲಾ ಕುಂಭ ರಾಶಿಯವನಾದರೆ ಅಭ್ಯಾಸ ಶೀಲ, ವಿದ್ವಾಂಸ ಶಾಸ್ತ್ರೀಯ ವಿಷಯಾಸಕ್ತ, ವಾಚನ ಪ್ರಿಯ, ಫಲ ಜ್ಯೋತಿಷದ ಆಸಕ್ತಿಯುಳ್ಳವ, ಭಾಷಾಜ್ಞಾನ ಚೆನ್ನಾಗಿರುವವ ಲೇಖಕ ಅಥವಾ ವಾಗ್ಮಿಯಾಗಿರುವನು. ಕರ್ಕಟಕ ಮೀನರಾಶಿಗಳ ಸಂಪರ್ಕದ ಚಂದ್ರನಿದ್ದರೆ ತಂತ್ರಗಾರ ಸಾತ್ವಿಕ ತನಗೊಂಡಿರುವ ಧಾರ್ಮಿಕ ಸರ್ವಜನ ಪ್ರಿಯ ಜನಗೌರವಪ್ರಾಪ್ತ, ಪೂಜಿತ ಗೃಹ ಕುಟುಂಬಪ್ರೀತಿಗಳು ಇರುವವ. ಕೃಷಿಯಲ್ಲಿ ಆಸಕ್ತಿಗೊಳ್ಳುವನು. ವೃಷಭ ಚಂದ್ರನಾದರೆ ಸ್ಥಿರನೂ ಗಂಭೀರನೂ ಯಾವುದೇ ಕೆಲಸವಿರಲಿ ಅದನ್ನೂ ಸರಿಯಾಗಿ ಸಾಧಿಸುವನು. ಉದ್ಯೋಗಶೀಲ ಧೀರೋದಾತ್ತ

ಗುಣಿ, ಭಾಗ್ಯಶಾಲಿ, ವೈಭವಯುಕ್ತನಾಗಿರುವನು. ಕುಟುಂಬದಲ್ಲಿ ಶಾಕಲಾಟಿ ಗೊಳ್ಳುವವ. ಕುಟುಂಬದಲ್ಲಿದ್ದು ಬೆಳವಣಿಗೆಯಾಗುವ್ವದು. ಸಾಮಾನ್ಯತ: ಲಗ್ನದ ಚಂದ್ರನು ಮನುಷ್ಯ ಸ್ವಭಾವ ಮುಸ್ವಭಾವ ಸತ್ಯನಿಷ್ಠೆ ಸತ್ಯಶೀಲ ಯಾವುದರಲ್ಲಿಯೂ ಅಂಟಿಗಿರುಸಿಕೆಗಳವರನ್ನೂ ನೋಡುವನು.

## ಎಲನ್‌ಲಿಯೋ

ಗ್ರಹಣಶಕ್ತಿ ಲಗ್ನದಲ್ಲಿ ಚಂದ್ರನಿದ್ದರೆ ಚೆನ್ನಾಗಿರುವುದು. ಗಳೆಯರು ಬಂಧುವರ್ಗೀಯರುಗಳ ವಿಚಾರದಲ್ಲಿ ಜಾಗರೂಕನಾಗಿರಬೇಕಿದೆ. ಇಲ್ಲವಾದರೆ ಅನ್ಯರ ಅಧೀನವಾಗಿ ಬಾಳಬೇಕಾಗುವುದು. ಜನತೆಯಲ್ಲಿ ತನ್ನ ಪ್ರಭಾವವನ್ನು ಬೀರುವ ಶಕ್ತಿ ಇರುತ್ತದೆ ಯಾವುವಾದರೂ ವಿಷಯಗಳ ಪರಿಣಾಮ ಮನಸ್ಸಿನಲ್ಲಿ ಬೇಗನೆ ಆಗುತ್ತಿರುವುದು ಎಂದು ಹೇಳಿರುವರು.

ಪೂರ್ಣಿಮಾ ಚಂದ್ರನು ಶುಭಫಲದವನೆಂದು ಗರ್ಗನ ಮತವಿದ್ದರೂ ಲಗ್ನದಿಂದ ಸಪ್ತಮದಲ್ಲಿ ರವಿಯಾಗುವನು. ಇದರಿಂದ ಲಗ್ನದ ಚಂದ್ರ ಮತ್ತು ಸಪ್ತಮದ ರವಿಯ ಪ್ರಭಾವ ಈ ಎರಡೂ ಹೊಂದಲವಕಾಶವಾಗುತ್ತಿರುವುದು. ಪಾಶ್ಚಾತ್ಯರು ಸಮಸಪ್ತಕಯೋಗ ಅಶುಭವೆನ್ನುವರು. ಎಲನ್‌ಲಿಯೋ ಶುಭನೆನ್ನುವನು. ಪುರುಷ ರಾಶಿಯ ಪೂರ್ಣಿಮಾ ಚಂದ್ರ ಚೆಲು ಆಕೃತಿ ಮೃದುಗುಣ ಕೊಡುವನು. ಧನವಂತನಾಗುವುದಿಲ್ಲ. ಚಂದ್ರ ಸಂಪತ್ತಿನ ಕಾರಕನಲ್ಲ. ಮನೋಕಾರಕ ವಿಲಾಸ ಚಂಚಲ ಪ್ರಕಾಶಕ ಗ್ರಹ. ಕ್ಷೀಣವೀರ್ಯನೆಂಬ ಫಲ ಚಂದ್ರನಿಗೆ ಸೇರತಕ್ಕುದಲ್ಲ. ಶನಿಯಿಂದ ಈ ಫಲ ಬರುತ್ತಿರುವುದು. ಕೆಟ್ಟ ಫಲಗಳು ಸ್ತ್ರೀರಾಶಿಯ ಚಂದ್ರನಿಂದಾಗುವವು. ಕುದುರೆ ಮೊದಲಾದ ಪ್ರಾಣಿ ವರ್ಗದಿಂದ ಗಾಯ ಹೊಂದುವಿಕೆ ಚಂದ್ರನಿಂದ ಇರುತ್ತದೆ. ಆಲಸ್ಯ ಕೃತಘ್ನತೆಯ ಫಲ ಸ್ತ್ರೀರಾಶಿಯ ಚಂದ್ರನಿಂದಾಗುವವು. ಪುರುಷ ರಾಶಿಯ ಚಂದ್ರ ಶುಭ ಫಲದವನಾಗುವನು. ಮೇಷ ವೃಷಭ ಕರ್ಕಟಕ ರಾಶಿಗಳ ಲಗ್ನದ ಚಂದ್ರ ಶುಭನೆಂದು ಕಲ್ಯಾಣವರ್ಮ ಸಾರಾವಲಿಯಲ್ಲಿ ಹೇಳಿರುವನಾದರೂ ಶುಭ ಫಲಾಧಿಕ್ಯ ಶುಭಗ್ರಹ ಯೋಗದಿಂದ ಬರುವುದು. ಅನ್ಯ ಭಾಧಿರ್ಯ ಮೂಕತೆ ಮೊದಲಾದ ಅನ್ಯ ರಾಶಿ ಫಲಗಳು ಅನುಭವಾತ್ಮಕವಾಗಲಾರವು. ಮೇಷ ಮಕರ ಕುಂಭ

ಚಂದ್ರನು ಕಪ್ಪುಬಣ್ಣ ಕೊಡುವನು. ಸ್ತ್ರೀರಾಶಿಯ ಚಂದ್ರ ಗಸ್ತ್ರೀಗೆ ಸ ಪ್ರಾಯದಲ್ಲಿ ರೋಗದಾಯಕನಾಗಿರುವನು. ಗ್ರಹಪರಿಭ್ರಮಣ ಪದ್ಧತಿಯಿಂದ ಈ ವರ್ಷ ಗುರುತಿಸಲಾಗಿದೆ ಸ್ತ್ರೀವಿಯೋಗ ಸಹನೆಗೆ ಸ್ತ್ರೀರಾಶಿಯ ಚಂದ್ರನೇ ಕಾರಣನಾಗುವನು. ವೃಶ್ಚಿಕದ ಚಂದ್ರ ಪಾಪಗ್ರಹರ ಯೋಗ ಸಂಬಂಧ ಗೊಂಡಿರುವನಾದರೆ ಅಶುಭಫಲಾನುಭವವಾಗುವುದು. ಪುರುಷರಾಶಿಯ ಚಂದ್ರನು ಎಲನ್ ಲಿಯೋ ಹೇಳಿದ ಫಲದವನಾಗುವನು. ಮೇಷ, ಸಿಂಹ, ಧನುರಾಶಿಗಳ ಲಗ್ನದ ಚಂದ್ರ ಇದ್ದರೆ ಯಾರನ್ನೂ ಅಂಟದೆ ತಮ್ಮ ಕೆಲಸ ವನ್ನು ಮಾಡುವರು. ಸ್ಥಿರತೆಯಿಂದ ವರ್ತನೆಗೊಂಡು ಇರುವರು. ಕಾಮೋಚ್ಛ್ರ ಭಯಂಕರ. ದೇಹಪ್ರಕೃತಿ ಸ್ಥೂಲವಿರುವುದಿಲ್ಲ ಮೇಷ ಚಂದ್ರ ವಿಚಾರ ಶಕ್ತಿ ದಾಯಕ, ಸಿಂಹ-ಬಲಾತ್ಕಾರದಾಯಕ, ಸಂಪತ್ತಿನ ವಿಷಯದಲ್ಲಿ ಚಿಂತೆ ಹೊಂದುವುದಿಲ್ಲ. ಸಂಪತ್ತು ಬೇಕಾದಾಗ ಬಂದು ವ್ಯಯಿಸುವವ, ಗೌರವಾ ಸಕ್ತ, ಧನು ಚಂದ್ರನು ಕಾಮೋಚ್ಛ್ಯ ಪ್ರಾಬಲ್ಯದಾಯಕ, ಹೆಂಡತಿಯ ಸುಖಕ್ಕೆ ಹಾನಿಯಾಗುತ್ತಿರುವುದು. ವೃಷಭ ಕನ್ಯಾ ಮಕರ ಚಂದ್ರನಾಗಿ ಲಗ್ನಗತ ನಾದರೆ ತಾನೇ ದೊಡ್ಡವ. ಅನ್ಯರು ತುಚ್ಛರು ಎಂದು ಬಗೆಯುವ ಅಹಂ ಕೃತಿ ತುಂಬಿದವ, ಜಂಭಾಳು, ಬಡಾಯಿಕೊಚ್ಚುವವ, ಸಮಾಜದಲ್ಲಿ ಬೆಳ ಕಿಗೆ ಬರುವವನಲ್ಲ. ವೃಷಭದ ಚಂದ್ರ ಸಂಸಾರಿಕ ಸುಖ ಕೆಡಿಸಿಗೊಳಿಸು ವವ. ವಿವಾಹವಾಗದವರೂ ಕಾಣುವರು. ವಿವಾಹವಾದರೂ ಸಂಸಾರಿಕ ಸುಖ ಕಡಿಮೆಯಾಗಿರುವುದು. ಮಧ್ಯವಯಸ್ಸಿನಲ್ಲಿ ಹೆಂಡತಿಗೆ ಕಷ್ಟದೋಷ ವಾಗುತ್ತಿರುವುದು. ಪರಸ್ತ್ರೀ ಸಂಪರ್ಕ ಇರುವುದು. ಅದು ಅನ್ಯರಿಗೆ ತಿಳಿ ದಿರುವುದಿಲ್ಲ. ಕ್ರೂರಕರ್ಮವೂ ನಡೆಯುತ್ತಿರುವುದು. ಮಿಥುನ ತುಲಾ ಕುಂಭ ಚಂದ್ರ ಮುಂದಾಳುತನದ ಅಭಿಲಾಷೆಯದಾತ ತನ್ನ ವರ್ಚಸ್ಸು ಹೊಂದಿರಬೇಕೆಂದು ಯಾವುದೇ ವಿಷಯದಲ್ಲೂ ಮಾತುಗಳುಳ್ಳವ, ತನ್ನ ಸ್ವಾರ್ಥ ಸಾಧನೆಗಾಗಿ ಅನ್ಯರನ್ನು ಹಾಸಿಗೊಳಿಸಲು ಹೇಸದವ. ತನಗೆ ಲಾಭ ಸುಖವಿಲ್ಲದಿದ್ದರೂ ದುಷ್ಕೃತ್ಯಕ್ಕೆ ಹಿಂಜರಿಯುವವನಲ್ಲ. ಕರ್ಕಟಕ-ವೃಶ್ಚಿಕ ಮೀನರಾಶಿಗತನಾದ ಲಗ್ನದ ಚಂದ್ರನಾಗಿದ್ದರೆ ತಾನು ತನ್ನ ಮನೆ ಹೆಂಡತಿ ಮಕ್ಕಳು ಅನ್ಯರ ವಿಚಾರವಿಲ್ಲದೆ ಇರುವವರು ಕಾಣುವರು. ಪೂರ್ವಕ್ಕೆ

ಪ್ರಯಾಣವೋ ಎಂದು ಕೇಳಿದರೆ ನಿಶ್ಚಿತಗೊಂಡಿಲ್ಲವೆಂದೂ ಪಶ್ಚಿಮ ದಕ್ಷಿಣ ದಿಕ್ಕುಗಳನ್ನು ಹೇಳಿದಲ್ಲಿ ತಾನು ಉತ್ತರದಿಕ್ಕಿಗೆ ಹೋಗಬೇಕೆಂದಿದ್ದೆ. ಇನ್ನು ಈಗ ಹೊರಡುವರೆ ತಮ್ಮ ಕೆಲಸ ಮಾಡೋಣ ಎನ್ನುವನು. ಲಗ್ನದಲ್ಲಿ ಚಂದ್ರನಿದ್ದವರ ವರ್ತನೆ ಮಾತುಗಳನ್ನು ಅನ್ಯರಿಂದ ತಿಳಿಯಲಶಕ್ಯ.

It tends to uncertain and unreliable behaviour so that it is unwise to depend too much upon persons who have it for their conduct at one moment may be quite different from what it will be an hour later ಎಂದು ಪಾಶ್ಚಾತ್ಯರ ಈ ಮತ ಕಾಣಬರುತ್ತದೆ.

ಧನಭಾವದ ಚಂದ್ರ.

ಬಹುಸುತಃ ಸಸ್ವಃ ಕುಟುಂಬೀ ಧನೇ (ವರಾಹ)

ಚಂದ್ರನು ಧನಭಾವದಲ್ಲಿ ಇದ್ದರೆ ಬಹುಪುತ್ರ ಸಂತಾನದವನೂ ಧನವಂತನೂ ಭರಣೀಯ ಜನಯುಕ್ತನೂ ಆಗುವನು.

ಲಗ್ನಗಶ್ಚ ವಿಧುಃ ರೋಗಂ ಸಪ್ತವಿಂಶತಿವತ್ಸರೇ ।
ತಸ್ಮಿನ್ನೇವಕರೋತೀಂದುಃ ದ್ವಿತೀಯಶ್ಚ ಧನಸಂಶಯಃ ॥ (ಹಿಲ್ಲಜಾತಕ)

ಧನಭಾವದ ಚಂದ್ರ ಇಪ್ಪತ್ತೇಳನೆ ಪ್ರಾಯದಲ್ಲಿ ಧನಲಾಭಕೊಡುವನು.

ಧನೇ ಚಂದ್ರೇ ಧನಾಲೋಕೇ ದೃಷ್ಟಿ ಭಿರ್ವಾವಲೋಕಿತೇ ।
ಭಗಿನ್ಯಾಸ್ತಸ್ಯ ಕನ್ಯಾಯಾದ್ರವ್ಯನಾಶೋಽಪಿ ಜಾಯತೇ ॥ (ಜಾತಕರತ್ನಾಕರ)

ಧನ ಭಾವದಲ್ಲಿ ಚಂದ್ರನು ಇದ್ದರೆ ಮತ್ತು ನೋಡಿದರೆ ಧನಿಕನಾಗುವನು. ಅವನ ತಂಗಿಯಿಂದಿರು ತಂಗಿಯ ಮಕ್ಕಳು ಸೊಸೆಯಿಂದಿರು ಆತನ ಸಂಪತ್ತನ್ನು ಉಂಡು ಅಳಿಯುವರು.

ಚಂದ್ರೋಽಪಿಧನಸ್ಥಾನೇಕ್ಷೀಣೋಽಪಿ ಶುಭವೀಕ್ಷಿತಃ ಸದಾಕುರುತೇ ।
ಪೂರ್ವಾರ್ಜಿತಾರ್ಥನಾಶಂನಿರೋಧಮಪಿಜಾನ್ಯವಿತ್ತಸ್ಯ ॥ (ವಿದ್ಯಾರಣ್ಯ)

ದ್ವಿತೀಯದ ಚಂದ್ರ ಕ್ಷೀಣಚಂದ್ರನಾಗಿ ಶುಭದೃಷ್ಟನಾದರೂ ಪೂರ್ವಾರ್ಜಿತ ಧನ ನಾಶಗೊಳಿಸುವವನು. ನವೀನ ಧನಲಾಭಕ್ಕೂ ಪ್ರತಿಬಂಧಕಗೊಳಿಸುವನು.

ಸುತ ಸೌಖ್ಯ ಅನ್ನ ಕುಟುಂಬಯುತಃ ಶಶಿನಿ ಪೂರ್ಣನವು ವಿಪ್ರವಿಣೇ ।
ಲಘುಜಕರಾಗ್ನಿ ಧನಬುದ್ಧಿಯುತ ವಿಕಲೇ ಕಲಾನತಿ ವದಂತಿ ಬುಧಾಃ ॥
(ಜಹದೇವ)

ಧನಭಾವದಲ್ಲಿ ಪೂರ್ಣಚಂದ್ರನು ಇದ್ದರೆ ಪುತ್ರ ಸುಖ ಅನ್ನಸುಖ ಗೂಡಿ ಒಳ್ಳೆಯ ಕುಟುಂಬದಿಂದ ಕೂಡಿರುವನು. ಕ್ಷೀಣಚಂದ್ರನು ಇದ್ದರೆ ಅಗ್ನಿಮಾಂದ್ಯವಾಗುವುದು. ಧನ ಬುದ್ಧಿಗಳಿಗೂ ಕ್ಷೀಣತೆಯಾಗುವುದು.

ಯವನರು ಧನಿಕನಾಗುವನು, ಮಿಷ್ಟಭಾಷಿ, ಜನಪ್ರಿಯ, ವಿಜಯಿ ಬಲಯುತ, ಮಿತ್ರಕ್ಷೇತ್ರ ಉಚ್ಚ ಸ್ವಕ್ಷೇತ್ರಗಳಲ್ಲಿದ್ದರೆ ಉತ್ತಮಲಾಭ ಫಲ ದಾಯಕನಾಗುವನು ಎಂದು ಹೇಳಿರುವರು.

ಪಾಶ್ಚಾತ್ಯರು ದ್ವಿತೀಯದ ಚಂದ್ರ ಬಲಪೂರ್ಣನೂ ಶುಭ ಸಂಬಂಧಿ ತನೂ ಆದಲ್ಲಿ ಸಾಂಪತ್ತಿಕ ಸೌಖ್ಯ ಉತ್ತಮವಾಗಿ ಉಂಟಾಗುವುದು. ವಿವಿಧ ವಸ್ತುಗಳ ಸಂಗ್ರಹಾಸಕ್ತಿಯಾಗುವುದು. ವಿಜಯಿ ಎನಿಸಿದ ಧನ ಸಂಗ್ರಹ ಗೊಳ್ಳುವನು ದ್ವಿತೀಯದ ಚಂದ್ರ ಉಚ್ಚದವನಿಗೆ, ಹೇರಳ ಸಂಪತ್ತನ್ನು ಸ್ತ್ರೀಯರ ಮೂಲಕ ಸಹಾಯ ಸಿದ್ಧಿಸುತ್ತದೆ. ಸಾರ್ವಜನಿಕ ವಿಷಯಗಳಲ್ಲಿ ಭಾಗಗೊಳ್ಳುವನು. ಅದರಲ್ಲಿ ಗೆಲವು ಉಂಟಾಗುವುದು. ವೃಶ್ಚಿಕ-ಮಕರ ರಾಶಿಗಳ ಧನದ ಚಂದ್ರ ಕೆಟ್ಟಫಲ ನಿರ್ಮಿಸುವನು. ಸಂಪತ್ತಿನ ಸುಖ ಸಂಪತ್ತುಗಳ ವ್ಯತ್ಯಯವಾಗುವುದು. ಕಣ್ಣಿನ ತೇಜೋಶಕ್ತಿ ಇರುವುದಿಲ್ಲ. ಅತಿ ಕೆಡು ಸ್ವಭಾವ ಕಾಣುವುದು. ಪ್ರಿಯಬೆಳೆದಂತೆ ಸಂಪತ್ತು ನಷ್ಟವಾ ಗುವುದು ಬಂಧುವರ್ಗದಿಂದ ತುಂಬ ತ್ರಾಸಹೊಂದುವನು. ಪ್ರವಾಸದಲ್ಲಿ ಅಯಶಸ್ವಿಯಾಗುವನು. ವೃಶ್ಚಿಕ-ಚಂದ್ರ ತನ್ನಿಂದಲೇ ಸಂಪತ್ತಿನ ನಾಶಕ್ಕೆ ಕಾರಣವಾಗುವುದು. ಎಷ್ಟು ಸಂಪತ್ತು ಇದ್ದರೂ ಅವನ ಜೀವನದಲ್ಲಿ ಧನ ಸಂಬಂಧ ತ್ರಾಸ ಉಣ್ಣಬೇಕಾಗುತ್ತದೆ. ಅನ್ಯಸ್ಥಳದಲ್ಲಿ ನೆಲೆಸಿದಾಗ ಪ್ರವಾಸ ಗೋಂಡು ನೆಲಸಿದಾಗ ಭಾಗ್ಯೋದಯವಾಗುವುದು. ಪ್ರವಾಸದ ಮೂಲಕ ಭಾಗ್ಯೋದಯವಾಗುವುದು. ಸಾರ್ವಜನಿಕ ಹಿತಕಾರ್ಯಗಳಿಂದ ಉನ್ನತಿ ಇಧರಿಂದ ಲಾಭ ಸಂಪತ್ತಿನ ವಿಷಯದಲ್ಲಿ ಸಮುದ್ರದ ತರಂಗಗಳಂತೆ ಏರಿಳಿತ ವಾಗುವುದು. ಆದ್ದರಿಂದ ಸಾರ್ವಜನಿಕ ಹಿತಕಾರ್ಯದ ಕರ್ಮದಲ್ಲಿ ಜನ

ತೆಗೆ ಅನುದಿನ ಆಗಾಗ ಬಳಸಬೇಕಾದ ವಸ್ತುಗಳ ಸಂಪರ್ಕದಿಂದ ಲಾಭವಾಗುವುದು. ಧನಗತನಾದ ಚಂದ್ರ ವಿವಾಹವಾದ ಪತ್ನಿಯ ಮೂಲಕ ಚಂದ್ರನ ಬಲದ ಅನುಸಾರದಂತೆ ಲಾಭ ಅಥವಾ ಹಾನಿಯನ್ನು ಕೊಡುವನು ಎಂದು ಹೇಳಿರುವನು.

ದ್ವಿತೀಯ ಧನಸ್ಥಾನ. ಈ ಸ್ಥಾನ ಪಂಚಮದಿಂದ ಕರ್ಮಸ್ಥಾನವಾಗುತ್ತಿದ್ದು ಪುತ್ರ ಸುಖಾದಿ ಫಲಗಳನ್ನು ಪೂರ್ವಜರು ನಿರ್ದೇಶಿಸಿದಂತೆ ಕಂಡುಬರುತ್ತದೆ. ದ್ವಿತೀಯದ ಚಂದ್ರ ಬಾಹ್ಯಭಾವದ ಸುಖ ಕಡಿಮೆಗೊಳಿಸುವನು. "ತನು ಕುಟುಂಬ" ಎಂದು ಮೊದಲಾಗಿ ಹೇಳಿದ ಭಾವಗಳು ಬಾಹ್ಯಭಾವಗಳು. "ಕಲ್ಯಸ್ವ" ಎಂದುಮೊದಲಾಗಿ ಹೇಳಿದ ಭಾವಗಳು ಆಭ್ಯಂತರ ಭಾವಗಳು. ದ್ವಿತೀಯದ ಚಂದ್ರ ಹಿರಿಯರ ಸಂಪತ್ತನ್ನು ಹಾನಿಗೊಳಿಸುವನು. ತನ್ನ ದುಡಿತದ ಸಂಪತ್ತಿನಿಂದ ಜೀವನ ನಡೆಯುತ್ತಿರುವುದು. ಊಟ ಉಪಚಾರಗಳಿಗೆ ಕೊರತೆಯಾಗುವುದಿಲ್ಲ. ಅನ್ನ ಬಟ್ಟೆಗಳ ವಿಚಾರದಲ್ಲಿ ಕಡಮೆಬಾರದೆ ಅನ್ಯರನ್ನೂ ಪೋಷಿಸುವ ಜವಾಬ್ದಾರಿಕೆ ಇರುತ್ತದೆ. ಚಂದ್ರ ಪ್ರಕಾಶಗ್ರುಹನಾಗಿ ಅನ್ಯರನ್ನು ಸಂತೋಷಗೊಳಿಸುವನಾದ್ದರಿಂದ ಈ ಚಂದ್ರ ಪರಪೋಷಣಾಫಲಕೊಡುವನು. ಪರರ ಹಿತದ ಕೆಲಸಗಳು ಈ ಚಂದ್ರನಿಂದಾಗುತ್ತಿರುವವು. ಧನಸ್ಥಾನದ ಚಂದ್ರನ ವಿಷಯವನ್ನು ಚಿಂತಿಸುವಾಗ William Lily ಈ ಕೆಳಗಿನಂತೆ ಹೇಳಿರುವನು. The second house from this house is required Judgement Concerning the estate or fortune of him of his wealth of property of all movable, money lent of profit or gain loss or damage in suits of Law" ಎಂದು ತನ್ನ ಗ್ರಂಥದ ಮುನ್ನುಡಿಯಲ್ಲಿ ಬರೆದಿರುವುದನ್ನೂ ವಿಚಾರಗೊಳ್ಳಬೇಕಿದೆ. ಪುರುಷರಾಶಿಯ ಚಂದ್ರ ಶುಭ. ಸ್ತ್ರೀರಾಶಿಯ ಚಂದ್ರ ತ್ರಾಸದಾಯಕ. ವೃಷಭ ಕರ್ಕಟಕದ ಧನಭಾವದ ಚಂದ್ರ ಅಧಿಕ ಸಂಪತ್ತಿನ ಫಲಗೊಳಿಸುವನು. ಬೇಗನೆ ಸ್ಥಿರ ಸಂಪತ್ತಾಗುವುದಿಲ್ಲ. ಮಕರ ಕುಂಭರಾಶಿಗಳ ಚಂದ್ರ ಇವುಗಳಿಗಿಂತ ಕಡಮೆ ತ್ರಾಸಫಲದವ. ಕನ್ಯಾ ವೃಶ್ಚಿಕಗಳ ಚಂದ್ರ ಇವುಗ

ಳಿಗಿಂತ ಕಡಮೆ ತ್ರಾಸ ಫಲದವ. ಕನ್ಯಾ ವೃಶ್ಚಿಕಗಳ ಚಂದ್ರ ಇವುಗಳಿಗಿಂತಲೂ ಕಡಮೆ ತ್ರಾಸ ಫಲದವ. ಅನ್ಯ ಮೇಷ, ಮಿಥುನ, ಸಿಂಹ, ತುಲಾ, ಧನು, ಮೀನಗಳ ಚಂದ್ರು ದೊಡ್ಡ ದೊಡ್ಡ ಉದ್ಯೋಗ ಸಂಸ್ಥಾ ಸಂಪರ್ಕ ಗೊಳಿಸುವನು. ತಿಳಿವಿನ ಬೆಳಕಿನಿಂದ ಬರುವಿಕೆಯಾಗುತ್ತದೆ. ಮಧುರ ವಾದ ಮಾತು. ಹೆಚ್ಚು ಮಾತಾಡುವವರಲ್ಲ. ಈ ಚಂದ್ರನು ವಕೀಲ ವೃತ್ತಿ ಯುವರಿಗೆ ಉತ್ತಮ ಫಲದವನು. ನ್ಯಾಯವಾದವನ್ನು ಅಭಿನಯ ಮೂಲಕ ಮೃದುಹಾಸ ಗೂಡಿ ನ್ಯಾಯಾಧೀಶರಿಗೆ ತಿಳಿಯಪಡಿಸಲು ಶಕ್ತರಾಗಿರುವರು. ಇಂತೆಯೇ ವೈದ್ಯಕೀಯ ವೃತ್ತಿಯವರಿಗೂ ಶುಭ ಫಲದಾತನಾಗುವನೂ ಚಂದ್ರನಿಗೆ ಉಕ್ತರೋಗಗಳನ್ನೂ ಹೋಗೊಳಿಸಲು ಶಕ್ತರಾಗಿರುವರು. ವಾತ-ಕಫ ಪ್ರಕೃತಿಯಿಂದು ಚಂದ್ರನನ್ನು ವರಾಹನು ತಿಳಿಯ ಪಡಿಸಿರುವು ದನ್ನು ನೆನವರಿಸ ಬೇಕಿದೆ. ಚಂದ್ರನು ನಿರಿಳಿತ ಉಳ್ಳವ. ನಿಯಮಿತ ರೀತಿಯಿಂದ ಶುಕ್ಲ ಕೃಷ್ಣ ಪಕ್ಷಗಳು ಆಗುವವು. ಇದರಿಂದ ನಿಯಮಿತ ರೀತಿಯಿಂದ ಉದ್ಯಮ ಸ್ಥಿರತೆ ಗೊಂಡಿರುವುದು. ಅಧಿಕಾಲ್ಪತೆಗಳಿರದೆ ಕರ್ಮನಡೆಯಿಸುವವರಾಗಿ ಉದ್ಯಮದಲ್ಲಿ ಯಶಸ್ವಿಗಳಾಗುವರು. ಸಮಾಜ ಪ್ರೀತಿ ಸಂಪಾದನೆ ಇಂತಿರುತ್ತದೆ.

## ತೃತೀಯಭಾವದ ಚಂದ್ರ

ಹಿಂಸ್ರೋ ಭ್ರಾತೃಗತೇ (ವರಾಹ)

ಸಹೋದರ ಭಾವದಲ್ಲಿ ಚಂದ್ರನು ಇದ್ದರೆ ಹಿಂಸಾಶೀಲನು.

ಚಂದ್ರೇ ಖಲಾನಾಂ ತ್ರಿತಯೇನದೃಷ್ಟೇ ಭ್ರಾತೃಪ್ರಣಾಶೋ ನ ಶುಭೇಕ್ಷಿತಶ್ಚೇತ್ ।
ಸೂರ್ಯೋSಗ್ರಜಾನ್ ಹಂತಿ ಕುಜೋSನುಜಾತಾನ್
ಪೂರ್ವಾಪರೋತ್ಥಾನ್ ಸಹಜಾನ್ಶನೈಃ ॥ ॥ಶಂಭುಹೋರಾ॥

ಭ್ರಾತೃಸ್ಥಾನಗತೇ ಚಂದ್ರೇ ಭ್ರಾತೃಸೌಖ್ಯಂಸಮಾದಿಶೇತ್
ನೀರೋಗೀ ಭ್ರಾತರೌ ದ್ವೌಚ ಭಗಿನೀತ್ರಯಮೇವ ಚ ॥ (ಹಿಲ್ಲಜಾತಕ)

ಮೂರರಲ್ಲಿ ಚಂದ್ರನಿದ್ದು ಮೂರು ಪಾಪಗ್ರಹರಿಂದ ದೃಷ್ಟನಾಗಿ ಶುಭಗ್ರಹ ದೃಷ್ಟಿ ವಿರಹಿತನಾಗಿದ್ದರೆ ಭ್ರಾತೃ ಜನರ ಹಾನಿಯಾಗುವುದು.

ಮೂರನೆ ಮನೆಯ ರವಿ ಅಗ್ರಜರನ್ನೂ ಮೂರರ ಕುಜ ಅನುಜಾತರನ್ನೂ ಮೂರರ ಶನಿ ಮೊದಲ ಮತ್ತು ಹಿಂದಣವರುಗಳಿಬ್ಬರನ್ನೂ ನಾಶಗೊಳಿಸುವನು ಎಂಬ ವಿಶೇಷವನ್ನೂ ಇಲ್ಲಿ ಕೊಡಲಾಗಿದೆ.

ಭ್ರಾತೃಸ್ಥಾನದ ಚಂದ್ರ ಭ್ರಾತೃಸೌಖ್ಯ ಕೊಡುವನು. ಅವರಲ್ಲಿ ಎರಡು ಭ್ರಾತೃಜನರು ಮೂರು ಭಗಿನಿಯರು.

ಯದಾ ವಿಕ್ರಮೇ ಚಂದ್ರಮಾ: ವಿಕ್ರಮೇಶೋ
ಸುಶೀಲ: ಸುಲೀಲೋಭವೇತ್ ತುಚ್ಛಲಬ್ಧ್ಯಾ ।
ತಪಸ್ವೀ ಸಮೋ ಧರ್ಮಧೀರೋದಯಾಲು
ಸ್ತಥಾ ಸ್ತ್ರೀ ಸುಧರ್ಮಾ ಧ್ರುವಂ ಪೂರ್ಣಬಿಂಬೇ ॥ (ಜಾಗೇಶ್ವರ)

ತೃತೀಯದಲ್ಲಿ ಪೂರ್ಣ ಚಂದ್ರನಿದ್ದರೆ ಪರಾಕ್ರಮಿ, ಒಳ್ಳೆಯ ನಡತೆ ಆಕಸ್ಮಿಕ ಲಾಭಕ್ಕಾಗಿ ತುಚ್ಛದೃಷ್ಟಿ ಗೊಂಡಿರುವವ. ತಪಸ್ವಿಯ ಆಚರಣೆಗೊಳ್ಳುವವ ಧೈರ್ಯವಂತ ದಯಾಳು. ಧಾರ್ಮಿಕ ಸ್ತ್ರೀಯ ಪತಿಯೆನಿಸುವನು.

ತೃತೀಯಃ ಪಂಚಮೇ ವರ್ಷೇ ಬಂಧು ಲಾಭಕರಃ ಶಶೀ (ಹಿಲ್ಲಜಾತಕ)

ತೃತೀಯದ ಚಂದ್ರ ಮೂರು ಮತ್ತು ಐದನೆ ವರ್ಷದಲ್ಲಿ ಬಂಧುಲಾಭ ಕೊಡುವನು.

ಪಿಶುನೋ ದಯಾವಿಹೀನೋ ಮಾಯಾವೀ ವಿಕ್ರಮಾನ್ವಿತೇ ಶಶಿನೀ (ವರಾಹಪುತ್ರ)

ತೃತೀಯದಲ್ಲಿ ಚಂದ್ರನು ಇದ್ದರೆ ದುರ್ಜನ ದಯಾಹೀನ ಮಾಯಾವಿ.

ತೃತೀಯದಲ್ಲಿ ಚಂದ್ರನು ಇದ್ದರೆ ಬಲದಿಂದ ಕೂಡಿದವ ಸಂತೋಷದಿಂದಿರುವವ ಸತ್ಕರ್ಮ ನಿಷ್ಠನಾಗಿರುವನೆಂದು ಯವನ ಮತ.

ಹಿಂಸ್ರ: ಸಗರ್ವ: ಕೃಪಣೋಲ್ಪಬುದ್ಧಿರ್ಭವೇಜ್ಜನೋ ಬಂಧುಜನಾಶ್ರಯಶ್ಚ ।
ದಯಾಭಯಾಭ್ಯಾಂಪರಿವರ್ಜಿತಸ್ಯಾತ್ ದ್ವಿಜಾದಿರಾಜೇ ಸಹಜೇ ಪ್ರಸೂತೌ ॥(ಮಹೇಶ)

ತೃತೀಯದಲ್ಲಿ ಚಂದ್ರನಿದ್ದವನು ಹಿಂಸಕ-ಗರ್ವಿಷ್ಠ, ಕೃಪಣ, ಅಲ್ಪಬುದ್ಧಿ, ಬಂಧುಜನರನ್ನು ಆಶ್ರಯಿಸಿರುವವ, ದಯಾಭೀತಿರಹಿತನಾಗಿರುವನು.

ಪ್ರವಾಸಾಸಕ್ತ, ತುಂಬ, ಕಿರು ದೊಡ್ಡ ಪ್ರವಾಸಗಳಾಗುವವು. ಶಾಸ್ತ್ರೀಯ ಗೂಢ ವಿಷಯದಲ್ಲಿ ಅಭಿರುಚಿಯುವ. ಉದ್ಯೋಗ ವ್ಯವಹಾರ

ಗಳಲ್ಲಿ ಆಗಾಗ ಅದಲು ಬದಲಾವಣೆ ಗೊಳ್ಳುವವೆ. ಚಮತ್ಕಾರಿಕ-ಚಿಂತನಾ ವ್ಯವಹಾರಗಾರ. ಅಮಲು ಕುಡುಕರ ನಡೆಯುವ, ಅನಿಶ್ಚಿತ ಸ್ವಭಾವದವ. ತೃತೀಯದಲ್ಲಿ ಬಲಿಷ್ಠನಾದ ಚಂದ್ರನು ಇದ್ದರೆ ಭ್ರಾತೃ ಜನ ಅಥವಾ ಭಗಿನಿಯರ ಸೌಖ್ಯ ಚೆನ್ನಾಗಿರುವುದು. ಪಾಲುಗಾರಿಕೆಯಿಂದ ಚೆನ್ನಾದ ನೆಲೆಗೊಳ್ಳುವನು. ಇಪ್ಪತ್ತೆಂಟನೆ ಪ್ರಾಯದಿಂದ ಪ್ರವಾಸ ಸಂಪರ್ಕವಾಗುವುದು. ಇದರಿಂದ ಅಭಿವೃದ್ಧಿಗೆ ಬರುವ ಒಳ್ಳೆಯ ಕೆಲಸಗಳಾಗುವವು. ಕೀರ್ತಿಯಾ ಪ್ರಸಿದ್ಧಿಯ ಕವರ್ಾರಂಭವಾಗುವುದು. ಎಂದು ಪಾಶ್ಚಾತ್ಯ ಮತ.

ಪರಿಭ್ರಮಣ ಪದ್ಧತಿಯಂತೆ ತೃತೀಯದಲ್ಲಿರುವ ಚಂದ್ರ ಪಂಚಮಕ್ಕೆ ಸೇರುವನು. ಈ ಕಾಲದಲ್ಲಿ ಸಹೋದರ ಸಹೋದರಿಯರಾಗುವುದು ಸಹಜವಾಗಿ ಹಿಲ್ಲಜಾತಕಕಾರನ ಮತವಾಗುವುದು. ಪುರುಷ ರಾಶಿಯಲ್ಲಿ ಜಾತಕ ರತ್ನಾಕರಕಾರನ ಮತ ಅನುಭವಕ್ಕೆ ಬರುವುದು. ಸ್ತ್ರೀರಾಶಿಯು ಮತ ಮಹೇಶನದ್ದು ಕಾಣುವುದು. ಕುಂಭ ರಾಶಿಯ ತೃತೀಯದ ಚಂದ್ರನಲ್ಲಿ ಉದ್ಯೋಗದಲ್ಲಿ ಹಲವಾರು ಬದಲಾವಣೆ ಚಮತ್ಕೃತಿಯ ಚಿಂತನೆ ಅನಿಶ್ಚಿತ ಸ್ವಭಾವಗಳು ಕಾಣುವವು. ಉಳಿದ ಪಾಶ್ಚಾತ್ಯ ಮತ ಸ್ತ್ರೀ ರಾಶಿಯ ಚಂದ್ರನಲ್ಲಿ ಕಾಣುವವು. ಹೆಚ್ಚಾಗಿ ಮೂರರ ಚಂದ್ರ ಸಹೋದರ ಸುಖಕ್ಕೆ ಅನುಕೂಲತೆ ಕೊಡುವುದಿಲ್ಲ. ಹೊಂದಿದರೂ ದೀರ್ಘಾಯುಸ್ಸಿರುವ್ರದಿಲ್ಲ. ಜೊತೆಯಾಗಿರಲು ಅವಕಾಶವಿರುವುದಿಲ್ಲ. ಸಹೋದರಿಯನ್ನು ಕೊಡುವನು. ತೃತೀಯದ ರವಿಯು ಅಕ್ಕ ತಂಗಿಯರಲ್ಲೊಬ್ಬರಿಗೆ ಪತಿ ಸುಖ ವಿಹೀನತೆ ವೈರಸ್ಯ, ಆರ್ಥಿಕ ಯಾ ಸಂತಾನ ಸುಖಾಭಾವ, ಅಥವಾ ಯಾವುದಾದರೂ ಅಂಗ ಸಂಪರ್ಕದ ದೋಷ ಫಲದಾಯಕನಾಗುವನು. ಕೆಲವೊಮ್ಮೆ ಸಹೋದರನೊಬ್ಬನಿಗೆ ಸಂತತಿ ಇರುವುದಿಲ್ಲ. ಈ ಫಲ ಚಂದ್ರನಿಗೂ ಸೇರುವವು.

## ಚತುರ್ಥ ಭಾವ

ಸುಖೇ ತತ್ಪ್ರೋಕ್ತ ಭಾವಾನ್ವಿತೋ (ವರಾಹ)

ಚತುರ್ಥಭಾವಕ್ಕೆ ಹೇಳಿದ ಫಲಗಳಿಂದ ಕೂಡಿರುವನು.

ತೃಷ್ಣಾನ್ನಭುಗ್ವಿನೀತಃ ಸ್ತ್ರೀಲೋಲಃ ಸೌಖ್ಯಭಾಕ್ ಸುಬಸ್ಥೇಂದೌ ॥ (ಪೃಥುಯಶ)

ಸುಖಭಾವದಲ್ಲಿ ಚಂದ್ರನು ಇದ್ದರೆ ಹಿತವಾದ ಅನ್ನಾಹಾರ ಗೊಳ್ಳುವನು. ಸ್ತ್ರೀಲೋಲುಪ ಸುಖಭಾಗಿ.

ಜಲಾಶ್ರಯೋತ್ಪನ್ನ ಧನೋಪಲಬ್ಧಿಂ ಕೃಷ್ಯಂಗನಾ ವಾಹನ ಸೂನು ಸೌಖ್ಯಮ್ ।
ಪ್ರಸೂತಿ ಕಾಲೇ ಕುರುತೇ ಕಲಾವಾನ್ ಪಾತಾಲಸಂಸ್ಥೋ ದ್ವಿಜ ದೇವಭಕ್ತಿಮ್ ॥
(ಮಹೇಶ)

ಜಲಸಂಬಂಧವ (ಜಲ-ನೀರು) ಪದಾರ್ಥಗಳಿಂದ ಧನಲಾಭ, ಕೃಷಿ, ಸ್ತ್ರೀ, ವಾಹನ ಪುತ್ರ ಸುಖಗಳನ್ನು ನಾಲ್ಕರಲ್ಲಿರುವ ಚಂದ್ರ ಕೊಡುವನು ಬ್ರಾಹ್ಮಣರು ದೇವತೆಗಳ ಭಕ್ತ.

ಬಂಧುಪರಿಚ್ಛೇದ: ಬಾಂಧವವಿರೋಧೀ (ಕಲ್ಯಾಣವರ್ಮ)

. ಬಂಧು ಜನ ವಿರೋಧಿಯು.

ವಿದ್ಯಾಶೀಲಸುಖಾನ್ವಿತ: ಪರವಧೂಲೋಲ: ಚತುರ್ಥೇವಿಧೌ (ವೈದ್ಯನಾಥ)

ವಿದ್ಯಾಗುಣ ಪ್ರಾಪ್ತ, ಸುಖ ಯಶೋಯುಕ್ತ, ಪರಸ್ತ್ರೀಲೋಲುಪನಾಗುವನು.

ನವೀನ ಗೃಹ ಪ್ರಾಪ್ತಿಯೆಂದು ಯವನ ಮತ. ಪೂರ್ಣಕರ್ಮಗೃಹವೇದೂ ಜಾಗೇಶ್ವರನ ಮತ.

ಚತುರ್ಥಗ: ಪುತ್ರಲಾಭವಮ್ ದ್ವಾವಿಂಶತಿವತ್ಸರೇ ಧ್ರುವಮ್ (ಹಿಲ್ಲಜಾತಕ)

ನಾಲ್ಕರಲ್ಲಿರುವ ಚಂದ್ರ ಇಪ್ಪತ್ತೆರಡನೆಯ ಪ್ರಾಯದಲ್ಲಿ ಗಂಡು ಮಗುವಿನಸುಖಲಾಭ ಕೊಡುವನು.

ದೊಡ್ಡ ಪುಣ್ಯಾತ್ಮ, ಉದಾರ ಚಿತ್ತ, ಅಧಿಕಾರ ಸ್ಥಾನದವ. ಮಲಿನ ಚಿತ್ತ, ಪಂಡಿತ, ಯಾ ಭಾಗ್ಯವಂತನಾಗುವನೆಂದು ಯವನ ಮತ.

ನಾಲ್ಕರ ಚಂದ್ರ ಗೃಹ, ಭೂಸಂಪತ್ತು, ಕೃಷಿಗಳ ಸುಖಕೊಡುವನು. ಚರರಾಶಿಗತನಾದ ಚಂದ್ರ ಆಗಾಗ ಮನೆ ಬದಲುಗೊಳಿಸುವನು. ಜೀವನದಲ್ಲಿ ಹತ್ತಾರು ಘಟನೆ ಸ್ಥಿತ್ಯಂತರಗೊಳಿಸುವನು. ಮಾತೃಧನ ವಾರೀಸು ಸಂಪತ್ತು ಹೊಂದಲವಕಾಶವಿರುತ್ತದೆ. ತಾಯಿ ಮೂಲಕ ಭಾಗ್ಯದ ಬೆಳವಣಿಗೆಗೊಳ್ಳುವುದು. ಮಾತೃಭಕ್ತ. ಜೀವನದ ಉತ್ತರ ಭಾಗ ಬಹಳ ಸುಖದಿಂದಿರು

ಪುದು ಚತುಷ್ಪಾದ ವಾಹನಗಳ ಸುಖ ಚೆನ್ನಾಗಿರುವುದು. ಇದರ ದೊಡ್ಡ ನೆಲೆ ಇರುವುದು. ದೇಹ ಸುಖಾಭಿಲಾಷಿಯಾಗಿ ಹೃಷ್ಟ ಪುಷ್ಟ ಶರೀರನಾಗು ವನು. ಶಿಂತಿ ತಿನಸುಗಳ ವ್ಯವಸಾಯದಿಂದ ಲಾಭವಾಗುವುದು. ನಾಲ್ಕರ ಬಲಿಷ್ಠನಾಗಿರುವನಾದರೆ ವಿವಾಹ ನಂತರ ಪ್ರಗತಿ. ಸ್ತ್ರೀಧನ ಭೂಸಂಪತ್ತು ಗಳನ್ನು ಹೊಂದುವನು ಎಂದು ಪಾಶ್ಚಾತ್ಯರ ಮತ.

ಕರ್ಕಟಿಕ ವೃಶ್ಚಿಕ ಮೀನಗಳ ಚಂದ್ರ ಜಲೀಯ ಸಂಪತ್ತನ್ನು ಕೊಡು ವನು. ಮಹೇಶನ ಅನ್ಯಫಲಗಳು ಪುರುಷ ರಾಶಿಯ ಚಂದ್ರನಲ್ಲಿ ಕಾಣುವವು. ಬಂಧು ವಿರೋಧ ಮಕರ ರಾಶಿಯ ಚಂದ್ರನಲ್ಲಿರುವುದು. ಒಂದೇ ಭಾವದ ವಿದ್ಯಾಶೀಲ ಗುಣ, ಪರವಧೂಲೋಲ ಎಂಬ ಫಲಗಳೆಂದು ತಿಳಿಯುವುದು ಸಮಂಜಸವಲ್ಲ. ಆಯುಸ್ಸಿನ ಉತ್ತರ ಭಾಗದಲ್ಲಿ ಸುಖ ಪೂರ್ವಭಾಗದಲ್ಲಿ ತಾಪ್ರಸಫಲದವ ಮೇಷ ಸಿಂಹ ಧನು ಮತ್ತು ವೃಷಭ ಕನ್ಯಾ ಮಕರ ರಾಶಿ ಗಳ ಚತುರ್ಥದ ಚಂದ್ರನಾಗಿರುವನು ಗೃಹ ಸುಖ ಪೂರ್ಣವೆಂಬ ಮಾತು ಜಾಗೇಶ್ವರನದು ಅಶಕ್ಯ. ಯವನರು ನವೀನ ನವೀನ ಗೃಹ ಸುಖವೆಂದಿ ರುವರು. ಪುರುಷರಾಶಿಯ ಚಂದ್ರ ಜೀವನದಲ್ಲಿ ಒಮ್ಮೆ ನವೀನ ಗೃಹ ನಿರ್ಮಾ ಣಗೊಳ್ಳಿಸುವಿಕೆ ಮಾಡುವನು. ಉದಾರ ಚಿತ್ತ ಮಲಿನ ಚಿತ್ತ ಎಂಬೀ ಎರಡು ಫಲಗಳು ಯವನ ಮತದವು ಒಂದೇ ರಾಶಿಗತವಾಗಲಾರವು. ಪುರುಷ ರಾಶಿಯ ಚಂದ್ರ ಒಳ್ಳೆಯ ಫಲದವ. ವೃಷಭ ಕನ್ಯಾ ಮಕರ ರಾಶಿಗತ ನಾದ ನಾಲ್ಕರ ಚಂದ್ರ ತಿಂಡಿ ತಿನಸುಗಳ ವ್ಯವಸಾಯದಿಂದ ಲಾಭದಾ ಯಕ. ಮಾತೃಧನ ವಾರೀಸು ಸಂಪತ್ತುಗಳು ವಿದೇಶೀಯರಲ್ಲಿ ಕಾಣುವವು. ವಿದೇಶದ ಮಹಿಳೆಯರು ದಾಂಪತ್ಯ ವಿಚ್ಛೇದಗೊಂಡು ನೆಲಸುವರು. ಬಳಿಕ ಅವಳ ಸಂತಾನ ಆ ಸಂಪತ್ತನ್ನು ಹೊಂದುತ್ತವೆ. ಪುರುಷರಾಶಿಯ ಚಂದ್ರ ಈ ಫಲದವ. ಮೇಷ ಸಿಂಹ ಧನುಗಳ ನಾಲ್ಕರ ಚಂದ್ರ ಹಿರಿಯರ ಸಂಪತ್ತಿನ ಸುಖ ತ್ಯಾಗ ಗೊಳಿಸುವವ. ಮಾತೃ ಇರುವಳು. ಮನಸ್ಸಿನ ಐಕ್ಯತೆ ಇರು ವುದಿಲ್ಲ. ವೃಷಭ ಕನ್ಯಾ ಮಕರ ವೃಶ್ಚಿಕಗಳ ನಾಲ್ಕರ ಚಂದ್ರ ಪೂರ್ವಾರ್ಜಿತ ಧನಸ್ಥಿತಿ ಗೊಳಿಸುವವನಲ್ಲ. ಮಿಥುನ ಕುಂಭರಾಶಿಗಳ ಚಂದ್ರ ಹಿರಿಯರು ಭೂಸಂಪತ್ತು ಕೊಡುವನು. ಕೊನೆಗೆ ಉಳಿಸುವವನಲ್ಲ. ಕರ್ಕಟಕ ತುಲಾ

ವಿಂಗ ರಾಶಿಗಳ ನಾಲ್ಕರ ಚಂದ್ರ ಹಿರಿಯರ ಭೂಸಂಪತ್ತನ್ನು ಕೊಡುವನು. ಅವನ್ನು ವೃದ್ಧಿಗೆ ತರುವನು. ಪುರುಷ ರಾಶಿಗತನಾದ ನಾಲ್ಕರ ಚಂದ್ರ ವಿವಾಹಾನಂತರ ವೃದ್ಧಿಫಲದಾತ. ನಾಲ್ಕರ ಚಂದ್ರನು ಇದ್ದಲ್ಲಿ ಹೆತ್ತವರಲ್ಲಿ ಒಬ್ಬರುವಮಾತ್ರ ದೀರ್ಘಯುಷ್ಯನವರಾಗಿರುವರು. ಚಾಳಿ ಇಸ್ತರೂ ಮುನಿಸ್ಸಿನ ಕೂಡಿಕೆ ಇರುವುದಿಲ್ಲ. ಮೂವತ್ತೆರಡನೆ ಪ್ರಾಯವರೆಗೆ ಭೂಸಂಪತ್ತು ಇರುವುದಿಲ್ಲ. ಬಳಿಕ ಭಾಗ್ಯವೃದ್ಧಿ ವಿವಾಹಾ ನಂತರ ಅಲ್ಲ ಸಂಪತ್ತು ಸ್ಥಿರತೆಗೆ ಬರುವುದು. ಎಣ್ಣೆ, ಔಷಧ, ಸಾಬೂನು, ಕೆಮಿಕಲ್ ವಸ್ತುಗಳ ಉದ್ಯಮ ಇವುಗಳ ಕಾರಖಾನೆಗಳ ನಿರ್ಮಾಣದಿಂದ ವೃದ್ಧಿಗೊಂಡು ನೆಲಸು ವಿಕೆಯಾಗುವುದು. ಚಂದ್ರ ನಾಲ್ಕರವ ಕುಲದೇವತಾ ಪ್ರೀತಿಕಾರಕ. ಈ ಚಂದ್ರ ಆಶ್ರಿತರಾಶಿ ಸಂಬಂಧದ ಗೃಹದೇವತೆಯ ಭಕ್ತಿ ಕಾರ್ಯಗೊಳ್ಳುವುದರಿಂದ ಸಂಸಾರಿಕ ಸುಖಕ್ಕೆ ರಕ್ಷಣೆಗೊಳಿಸುವನು.

## ಪಂಚಮದ ಚಂದ್ರ

ಸತನಯೋ ತತ್ಪ್ರೋಕ್ತ ಭಾವಾನ್ವಿತ: (ವರಾಹ)

ಇದರಲ್ಲಿ ಚಂದ್ರ ಇದ್ದರೆ ಪಂಚಮ ಭಾವಕ್ಕೆ ಹೇಳಲಾದ ಭಾವಫಲದಿಂದ ಕೂಡಿರುವನು

ಸ್ತ್ರೀಬುದ್ಧಿಸತ್ವಯುಕ್ತೋ ಬಹುಶ್ರಮೋತ್ಪನ್ನವಿತ್ತವಾನ್ ಸುತಗೇ (ಪೃಥುಯಶ:)

ಇದರಲ್ಲಿ ಚಂದ್ರನಿರಲು ಹೆಂಗುಸರ ಬುದ್ಧಿವಂತಿಕೆ, ಸತ್ವಗುಣಯುತ, ಅತಿಶ್ರಮದಿಂದ ಧನಾರ್ಜನೆ ಗೊಂಡು ಬರುವನು.

ಪಂಚಮೋ ರಜನೀನಾಥ: ಕನ್ಯಾಪತ್ಯಮಪುತ್ರಕವ್ ।
ಕ್ಷೀಣ:ಪಾಪಯುತೋ ಜನಯೇಚ್ಚಂಚಲಾಂ ಸುತಾವ್ ॥ (ಗರ್ಗಾಚಾರ್ಯ)

ಪಂಚಮದಲ್ಲಿ ಚಂದ್ರನು ಇದ್ದರೆ ಕನ್ಯಾ ಸಂತಾನ ಮಾತ್ರ. ಪುತ್ರ ಸಂತಾನವಿರುವುದಿಲ್ಲ. ಕ್ಷೀಣ ಯಾ ಪಾಪಯುತನಾದ ಚಂದ್ರನಾದರೆ ಚಂಚಲ ಳಾದ ಪುತ್ರಿಯನ್ನು ಕೊಡುವನು.

ಸುತೇಚಂದ್ರೇ ಸುತಾಢ್ಯಶ್ಚ ರೋಗೀಕಾಮಿಭಯಾನಕ: ಕೃಶ್ರಿವೈ: ಪೌರುಷೈರ್ಯುಕ್ತೋ ವಿನಯೀಚ ಭವೇನ್ನರ: ॥ (ಕಾಶಿನಾಥ)

ಇದರ ಚಂದ್ರನಿಂದ ಪುತ್ರ ಸಂತಾನವಾಗುವುದು. ರೋಗಿಯೂ

ಕಾಮಿಯೂ ಭಯಾನಕನೂ ಆಗುವನು ಕೃಶ್ರಿಮ ಪೌರುಷದವ, ವಿನಯವಂತ.

ಸುಧೀರಃ ಸುಶೀಲಃ ಸುವಿತ್ತಃ ಸುದೇಹಃ ಸುಗೇಹಃ ಸುನೀತಿಃ ಸುಗೀತಿಃ ।
ಸುಬುದ್ಧಿಃ ಸುವೃದ್ಧಿಃ ಪುತ್ರೋನರಃ ಸುಪುತ್ರಗೇಹೇಶಪುತ್ರೇ (ಹರಿವಂಶ)

ಐದರಲ್ಲಿ ಚಂದ್ರನಿರಲು ಒಳ್ಳೆಯ ಧೈರ್ಯ ಸುಶೀಲ ವಿತ್ತ ಚಿತ್ತ ದೇಹ ಗೃಹ ನೀತಿ ಗೀತಿ ಬುದ್ಧಿ ಅಭಿವೃದ್ಧಿ ಅತ್ರಿಪುತ್ರ ಫಲಗಳು.

"ಪಂಚಮೇ ಶತ್ರುವರ್ಷೇಚ ವಹ್ನಿನಾಪೀಡಿತೋ ಭವೇತ್" (ಹಿಲ್ಲಜಾತಕ)

ಪಂಚಮದ ಚಂದ್ರನು ಆರನೆಯ ವರ್ಷದಲ್ಲಿ ಅಗ್ನಿ ಪೀಡೆ ಕೊಡುವನು.

ದೊಡ್ಡ ಚೆಲುದೇಹ ತೇಜಸ್ವಿ ವಾಹನಯುಕ್ತ ವಿಚಾರಶೀಲ ಸುಶೀಲ. ರಾಜಕೀಯ ಕರ್ಮದಿಂದ ಚೆನ್ನಾದ ಯಶಸ್ಸನ್ನು ಹೊಂದುವನು. ಎಂದು ಯವನ ಮತ.

ಚಂದ್ರ ವಿಲಾಸ ವಿನೋದ ಮನೋರಂಜನೆಗಳಲ್ಲಿ ಆಸಕ್ತಿ, ಮಕ್ಕಳಲ್ಲಿ ಯಾ ಹೆಂಗುಸರಲ್ಲಿ ಮೆಚ್ಚುಗೆ ಹೊಂದಿರುವವ ಇವರ ಮಕ್ಕಳು ಚೆಲು ದೇಹದವರಾಗಿರುವರು. ಆನಂದ ವೈಭವಗೊಂಡಿರುವನು. ಚಂದ್ರ ಬಲಿಷ್ಠನಾಗಿದ್ದರೆ ಸಟ್ಟೆ ಜುಗಾರಿಗಳಿಂದ ಲಾಭಪಡೆಯುವನು. ದ್ವಿಸ್ವಭಾವರಾಶಿಯ ಚಂದ್ರನಲ್ಲಿ ಅವಳಿ ಜವಳಿ ಮಕ್ಕಳಾಗುವರು. ಈ ಚಂದ್ರ ಸಪ್ತಮದಲ್ಲಿ ಯಾ ಲಾಭದಲ್ಲಿ ಇದ್ದರೆ ಸ್ತ್ರೀಯಿಂದ ಸಂಪತ್ತು ಯಾ ಭಾಗ್ಯೋದಯವಾಗುವುದು. ದೂಷಿತನಾದ ಚಂದ್ರ ಸಪ್ತಮ ಲಾಭಗಳಲ್ಲಿದ್ದರೆ ಕೆಟ್ಟ ಫಲ ಕೊಡುವನು. ಕೊಳೆ ಮನಸ್ಸಿನಿಂದ ಕೂಡಿರುವನು. ಇದರಿಂದ ಅತಿಕಷ್ಟವನ್ನುಣ್ಣುವನು. ಅಪಕೀರ್ತಿ ಆಶಾಭಂಗ, ಮನಸ್ಸಿನ ಅಸ್ಥಿರತೆಗಳನ್ನೂ ಪಂಚಮದ ಅಶುಭ ಚಂದ್ರನುಂಟು ಮಾಡುವನು. ಪಂಚಮದ ಚಂದ್ರನನ್ನು ಶನಿ ನೋಡುವನಾದರೆ ಆತ ದೊಡ್ಡ ಸಗೆಗಾರ, ವಂಚಕ, ಕಪಟಕರ್ಮಿ. ಮಾತಿನಿಂದ ಮರುಳುಗೊಳಿಸಿ ಆಪ್ತಜನರನ್ನು ಕಷ್ಟಕ್ಕೆ ಈಡು ಮಾಡಿ ಧನ ಸಂಗ್ರಹಗೊಳ್ಳುವನು ಅಲ್ಪ ಸಂತಾನಸಲ್ಲದ ರಾಶಿಗತ ಚಂದ್ರ ಬಹು ಸಂತಾನ ಕೊಡುವನು. ಚಂದ್ರ ಕುಜಯುತನಾಗಿರುವನಾದರೆ ಸಾಹಸಮನೋವೃತ್ತಿ ಗೊಳ್ಳುವನು. ಬಲಿಷ್ಠನಾದ ಚಂದ್ರ ಐದರಲ್ಲಿದ್ದರೆ

ಮಕ್ಕಳು ಭಾಗ್ಯಶಾಲಿಗಳಾಗುವರು. ಎಂದು ಶಾಸ್ತ್ರಾಕ್ತರು ಹೇಳುವರು

ಸುಪುತ್ರೋ ಮೇಧಾವೀ ಮೃದುಗತಿರವಸ್ಕ್ಯಸ್ತಗತೇ ॥ (ಮಂತ್ರೇಶ್ವರ)

ಇದರಲ್ಲಿ ಚಂದ್ರನು ಇದ್ದರೆ ಸತ್ಪುತ್ರರಾಗುವರು. ಮೇಧಾವಿ, ಮೆಲ್ಲ ಮೆಲ್ಲನೆ ನಡೆಯುವವ ಮಂತ್ರಿಯಾಗುವ.

ಪಂಚಮದಲ್ಲಿ ವೃಷಭ ಕನ್ಯಾ ಮಕರದವ ಹೆಣ್ಣು ಮಕ್ಕಳನ್ನು ಹೆಚ್ಚು ಕೊಡುವನು. ಪುತ್ರಸಂತಾನ ವಿಹೀನತೆಯು ಫಲವಿರುವುದಿಲ್ಲ. ವಿಳಂಬ ವಾಗಿ ಒಂದು ಗಂಡು ಮಗು ಹೊಂದುವಿಕೆಯಾಗುತ್ತದೆ. ನಲುವತ್ತೆರಡು ಪ್ರಾಯಕ್ಕೆ ಬರುವಾಗ ಗಂಡು ಮಕ್ಕಳಾಗುವರು. ಮಿಥುನ ತುಲಾ ಕುಂಭ ಗಳ ಪಂಚಮದ ಚಂದ್ರ ಪುತ್ರ ಸಂತಾನ ವಿಷಯದಲ್ಲಿ ದೋಷಫಲಾಧಿಕ್ಯದ ವನಾಗುವನು. ಸ್ತ್ರೀಸಂತಾನವಿರುವುದು. ಕರ್ಕಟಕ ವೃಶ್ಚಿಕ ಮೀನ, ಮೇಷ ಸಿಂಹಧನುಗಳ ಚಂದ್ರ ಪರಾಕ್ರಮದವ ಪ್ರಥಮ ಪುತ್ರ ಸಂತಾನಕ್ಕೆ ಅನಿಷ್ಟದಾಶನಾಗುವನು. ಮೊದಲನೆ ಪುತ್ರ ಸಂತಾನಕ್ಕೆ ಹಾನಿಯಾಗಿ ಬಳಿಕ ಸ್ತ್ರೀ ಸಂತಾನ ಹೊಂದಿ ಬಳಿಕ ಪುತ್ರಸಂತಾನ ಯೋಗನಾಗುವುದು.

ಕೃತ್ರಿಮ ಪೌರುಷ ಯುಕ್ತನೆಂದು ಕಾಶಿನಾಥಾಚಾರ್ಯರು ಹೇಳಿರು ವರು. ಕೃತ್ರಿಮ ಪೌರುಷ ನಿಜವಾದ ಪೌರುಷವಲ್ಲನೆಂದು ಇದರಿಂದ ತಿಳಿ ಯಬೇಕಾಗುತ್ತದೆ. ಅನ್ಯರ ಮನಸ್ಸನ್ನು ಬದಲುಗೊಳಿಸುವ ಪೌರುಷ ಸಾಧನೆ ಚಂದ್ರನಿಂದಾಗುತ್ತಿದೆ. ನಟನು ನಾಟಕದಲ್ಲಿ ಅಭಿನಯಿಸಿ ತೋರುವ ಪೌರುಷ ಕಾರ್ಯಗಳು ಇಂತಹವು. ನಾಟಕ ಪರದೆಯು ಚಿತ್ರ ಮತ್ತು ನಾಟಕದ ನೇಪಥ್ಯಕರ್ಮಗಳು, ವ್ಯಕ್ತಿಯ ನೆಲೆಯ ಕೃತ್ರಿಮ ಪೌರುಷ ಗಳಾಗುವವು. ನಪುಂಸಕತ್ವದ ಚಂದ್ರ ಮಿಥುನ ತುಲಾ ಕುಂಭದವನಿಂದಾ ಗಲು ಶಕ್ಯವಿದೆ. ಕರ್ಕಟಕ ವೃಶ್ಚಿಕ ಮೀನಗಳ ಚಂದ್ರ ಕರ್ಮ ವಿಚಾರ ಶೂನ್ಯತೆ ಗೊಳಿಸುವನು. ಅಭಿನಯಕ್ರಿಯೆಯಂತೆ ಜೀವನ ರಂಗದ ನಿಲುವು ಯನ್ನು ಈ ಆಚಾರ್ಯರು ತಿಳಿಸಿದಂತೆ ಕಂಡು ಬರುವುದು.

ಪುರುಷ ರಾಶಿಯ ಚಂದ್ರನಲ್ಲಿ ಪರಿವಂಶಕಾರನ ಶುಭಫಲಗಳು ಹೊಂದಿ ಬರುವವು. ಮೂರು ಪುತ್ರರೆಂಬ ಫಲ ಕರ್ಕಟಕ ವೃಶ್ಚಿಕ ಮೀನರಾಶಿಗಳ ಚಂದ್ರನಿಗಾಗುವುದು. ಯಾವ ರಾಶಿಯ ಚಂದ್ರ ಮೂರು ಗಂಡು ಮಕ್ಕಳನ್ನು

ಕೊಡುವನೆಂಬ ವಿಚಾರವನ್ನು ಇಲ್ಲಿ ಹೇಳಿಲ್ಲ.

ಆರನೆ ಪ್ರಾಯದಲ್ಲಿ ಅಗ್ನಿಯ ಪೀಡೆಯೆಂಬ ಫಲ ಪಿಲ್ಲ ಜಾತಕಕಾರ ನದ್ದು. ಐದನೆ ಸ್ಥಾನವೆಂದು ಐದು ವರ್ಷ ಕಳೆದ ಮೇಲಿನ ವರ್ಷ ಕೊಡ ಲಾಗಿದೆ. ಕುಜನ ದೃಷ್ಟಿ ಮೇಷ ಸಿಂಹ ಧನುರಾಶಿಗಳ ಚಂದ್ರನಿಗೆ ಇದ್ದರೆ ಅಗ್ನಿಬಾಧೆ ಹೊಂದಲವಕಾಶವಾಗುವುದು. ಕುಜನ ಬೆಂಕಿ-ಸುಡು ಬೇಕಿ ಸೂರ್ಯನತಾಪಭಿನ್ನ. ಯವನ ಪಾಶ್ಚಾತ್ಯರುಗಳ ಶುಭ ಫಲಗಳು ಪುರುಷ ರಾಶಿಯಲ್ಲೂ ಅಶುಭ ಫಲಗಳು ಸ್ತ್ರೀರಾಶಿಯಲ್ಲೂ ಹೊಂದಿ ಬರುವವು.

ಮೇಷ ಸಿಂಹ ಧನು ರಾಶಿಗಳ ಚಂದ್ರನು ತೊಡಕುಗೂಡಿ ವಿದ್ಯಾಪೂರ್ಣತೆ ಗೊಳಿಸುವವ. ಶಿಕ್ಷಣ ಕಡಮೆ ಗೊಳ್ಳುವಿಕೆಯೂ ಈ ರಾಶಿಗಳ ಚಂದ್ರನಲ್ಲಿ ತೊಡಕುಗಳನ್ನು ಈ ಕಾಲದಲ್ಲಿ ಹೊಂದುವಿಕೆಯೂ ಇದೆ. ಕುಟುಂಬ ವಾತಾವರಣ ಆರ್ಥಿಕ ವಿಷಯಗಳಿಂದಲೂ ತೊಡಕು ಆಗುತ್ತಿರುವುದು. ಉಚ್ಚ ಶಿಕ್ಷಣದ ಪದವೀಧರರು ಕಾನೂನು ವಿಷಯವನ್ನು ಹೊಂದಲವಕಾಶವಾಗುತ್ತದೆ. ವೃಷಭ ಕನ್ಯಾ ಮಕರ ಚಂದ್ರ ಶಿಕ್ಷಣ ಕಡಮೆಗೊಳಿಸುವವ. ಉಚ್ಚ ಶಿಕ್ಷಣದಲ್ಲಿ ಮುಂದರಿದಾಗ ರಾಸಾಯನಿಕ ವಿಷಯಗಳನ್ನೂ ಯಾಂತ್ರಿಕ ವಿಷಯಗಳನ್ನೂ ಹೊಂದಿ ಬರುವವು. ಸಾರ್ವಜನಿಕ ಹಿತಕ ಖಾತೆಯಲ್ಲಿ ಉದ್ಯೋಗ ಗೊಳ್ಳುವರು. ಆರ್ಥಿಕ ಸಂಸ್ಥೆ ಅಂಚೆ ಉಗಿಬಂಡಿ ಇವುಗಳ ಸಂಪರ್ಕಗೊಂಡು ಬರುವರು. ಕರ್ಕಟಕ ವೃಶ್ಚಿಕ ಮೀನರಾಶಿಗಳವರು ವಕೀಲರೂ ವೈದ್ಯರೂ ಕಂಡು ಬರುವರು. ಜೀವನ ಮಾರ್ಗದಲ್ಲಿ ಜನತೆಯಲ್ಲಿ ಮುಂದರಿದು ಬರಲಿರುವ ಮಹತ್ವಾಕಾಂಕ್ಷೆ ಇದರಲ್ಲಿ ತುಂಬಿರುತ್ತದೆ. ಯಶಸ್ಸಿನ ಗಳಿಕೆ ಕಡಿಮೆಗೊಳ್ಳುತ್ತಿರುವುದು. ವೈದ್ಯಕೀಯ ವೃತ್ತಿಯವರು ಜೀವನದಲ್ಲಿ ಮುನ್ನಡೆ ಗೊಂಡುಬರುವರು. ಮಿಥುನ ತುಲಾ ಕುಂಭ ಗತ ಚಂದ್ರನು ಕರ್ಮಸಾಧನೆ ಗೊಳಿಸುವನು. ಯಾವುದಾದರೂ ವಸ್ತು ನಿರ್ಮಾಣ ಕಾರ್ಯಕ್ಕಿಳಿಸುವನು. ಸಂಪತ್ತಿನ ಅಭಿಲಾಷೆ ತುಂಬಿದ ವರಾಗಿರು. ಧನಾರ್ಜನೆಯ ಲೋಭ ಗೊಂಡು ದಾಂಪತ್ಯ ವಿಚಾರ ವಿಷಯಾಸಕ್ತಿಗಳಿಂದ ದೂರ ಗೊಳ್ಳುವವರೂ ಕಾಣುವರು. ಕಳತ್ರಸೌಖ್ಯ ಹೊಂದುವಿಕೆಯಾಗುತ್ತದೆ. ಸಂತಾನ ವಿಷಯದಲ್ಲಿ ಈ ಚಂದ್ರ ಶುಭನಾಗಿರುವುದಿಲ್ಲ.

ಆದ್ದರಿಂದ ದಂಪತಿಗಳ ಗ್ರಹಕುಂಡಲಿಯನ್ನು ಪರಸ್ಪರ ನೋಡಿ ಫಲೋಪದೇಶ ಹಿತಕರ. ಪಂಚಮದ ಚಂದ್ರ ದೂಷಿತನಾಗಿ ಉಚ್ಚಯಾ ನೀಚರಾಶಿಗತನಾಗಿದ್ದರೆ ಮಗಳೊಬ್ಬಳ ಸಂಸಾರಿಕ ಜೀವನ ಸರಿಗೊಂಡಿರುವುದಿಲ್ಲ. ಆಕೆ ಪತಿ ವಿಹೀನೆ ಅಥವಾ ಗಣಿಕೆ ಯಾ ದೇಹದ ಅಂಗಗಳಲ್ಲಿ ಊನತೆ ಹೊಂದಿರುವಳು. ಇದರಿಂದ ದಾಂಪತ್ಯ ಹೊಂದದಿರುವಿಕೆಯಾಗುತ್ತದೆ. ಉಚ್ಚ ನೀಚ ರಾಶಿಗತನಾಗಿ ಪಂಚಮದ ಚಂದ್ರನನ್ನು ಕಂಡಲ್ಲಿ ಫಲಬೋಧಕನು ದೂಷಿತನಾಗಿದ್ದರೆ ಅಹಿತನು ಎಂಬುದನ್ನು ತಿಳಿದಿರಬೇಕಾಗುತ್ತದೆ.

## ಷಷ್ಠದ ಚಂದ್ರ

ನೈಕಾರಿರ್ಮೃದು ಕಾಯವಹ್ನಿ ಮದನಸ್ತೀಕ್ಷ್ಣೋಲಸಶ್ಚಾರಿಗೇ ॥ (ವರಾಹ)

ಆರರಲ್ಲಿ ಚಂದ್ರನು ಇದ್ದರೆ ಬಹುಶತ್ರು ಮಂದಕಾಮಯಾಗ್ನಿ ಮಂದ ಕಾಮ ತೀಕ್ಷ್ಣತೆಯುವ, ಆಲಸ್ಯದವ.

ಲಗ್ನಾತ್ ಷಷ್ಠಸ್ಥಿತೇ ಚಂದ್ರೇ ಮೃದುಕಾಯಃ ಸ್ಮರಾನಲಃ ।
ಅತೀಕಾಽತಿ ಕ್ರೋಧೇ ತೀಕ್ಷ್ಣೋರಿಷ್ಟಸ್ಸ್ಯಾನ್ಮೃತ್ಯುರೇವಚ ॥ (ಗರ್ಗ)

ಲಗ್ನದಿಂದ ಆರರಲ್ಲಿ ಚಂದ್ರನು ಇದ್ದರೆ ದೇಹ ಮೃದುತೆಗೂಡಿರುವನು. ಕಾಮವಾಗ್ನಿಯುತನು, ಬಹುಶತ್ರುಗಳುಳ್ಳವನು. ಅತಿ ಕ್ರೋಧಿ, ಮೃತಿ ಸಮಾನ ಪೀಡಾದಾತನು.

ಷಷ್ಠೇ ಚಂದ್ರೇ ಪಾಪವೀಕ್ಷಿತೇ ಕನ್ಯಾಪತ್ಯೋಥಮಾತುಲಃ ।
ಮಾತೃಕ್ವಸಾ ಮೃತಾಪತ್ಯಾ ರಂಡಾ ದೇಶಾಂತರಂಗತಾ ॥ (ಪುಂಜರಾಜ)

ಆರರಲ್ಲಿ ಚಂದ್ರನು ಪಾಪವೀಕ್ಷಿತನಾಗಿ ಇದ್ದರೆ ಸೋದರ ಮಾವನಿಗೆ ಹೆಣ್ಣು ಮಕ್ಕಳು ಇರುವರು. ತಾಯ ತಂಗಿಯು ಮೃತ ಸಂತಾನದವಳು. ವಿಧವೆಯಾಗುವಳು ದೇಶಾಂತರಕ್ಕೆ ಹೋಗುವಳು.

ಷಷ್ಠೇ ಚಂದ್ರೇ ವಿತ್ತಹೀನೋ ಮೃದುಕಾಯೋಽತಿಲಾಲಸಃ ।
ಮಂದಾಗ್ನಿಸ್ತೀಕ್ಷ್ಣದೃಷ್ಟಿಶ್ಚ ಪಾಪಬುದ್ಧಿರ್ಭವೇನ್ನರಃ ॥ (ಕಾಶಿನಾಥ)

ಆರರಲ್ಲಿ ಚಂದ್ರನು ಇದ್ದರೆ ಮೃದುಕಾಯ. (ಮೈ ಮುರಿದು ಕೆಲಸಮಾಡದ ಶ್ರಮ ವಿರಹಿತ ಶರೀರ ಸುಖದವನು.) ಸಂಪತ್ತಿರದವನು. ಅತಿಲೋಭಿ. ಅಗ್ನಿಮಾಂದ್ಯ ರೋಗಿ, ಕ್ರೂರ ದೃಷ್ಟಿ, ಪಾಪ ಬುದ್ಧಿಯವನಾಗುವನು.

ಸುಖಂನಾತು: ಸ್ವಲ್ಪಂ ಪ್ರಭವತಿ ಗದಾನಾಮತಿರತಿ: ।　　　　(ಜೀವನಾಥ)

ತಾಯಿ ಸುಖ ಸ್ವಲ್ಪ. ಅತಿರತಿ (ಬಹುಭೋಗಾಸಕ್ತಿ) ರೋಗಕ್ಕೆ ಕಾರಣವಾಗುವುದು.

ಅಲ್ಪಾತ್ಮಜವಾನ್ ರಿಪುಸ್ಥೇ　　　　(ಜಯದೇವ)

ಆರರಲ್ಲಿ ಚಂದ್ರನು ಇದ್ದರೆ ಪುತ್ರ ಸಂತಾನ ಕಡಮೆ.

ಚಂದ್ರ: ಕರೋತಿ ವಿಕಲಂ ವಿಫಲಂಪ್ರಯತ್ನಮ್　　　　(ವಸಿಷ್ಠ)

ಅಂಗವಿಕಲತೆಯಾಗುವುದು ಪ್ರಯತ್ನ ಕಾರ್ಯಗಳು ಫಲಹೀನಗಳಾಗುವವು. ಅಯಶಸ್ವಿಯಾಗುವನು.

ಯದಾ ಸೋಮೇಕ್ರೂರದೃಷ್ಟ್ಯಾ ನ ಸುಖಂಮಾತುಲಸ್ಯ ಚ ।
ತಸ್ಯವಂಶೋದ್ಭವ: ಕೋಪಿ ಗತೋ ದೇಶಾಂತರೇ ಮೃತ: ॥ (ಜಾತಕ-ಮುಕ್ತಾವಳೀ)

ಪಾಪಗ್ರಹನ ದೃಷ್ಟಿ ಆರರ ಚಂದ್ರನಿಗಿದ್ದರೆ ಸೋದರ ಮಾವನ ಸುಖವಿರುವುದಿಲ್ಲ. ಸೋದರ ಮಾವಂದಿರಲ್ಲಿ ಯಾವನಾದರೂ ಒಬ್ಬ ವಿದೇಶಕ್ಕೆ ಹೋಗುವನು. ಅಲ್ಲಿ ಮರಣ ಹೊಂದುವನು

ಷಷ್ಠೇ ಚ ಪ್ರಮಿತೇ ವರ್ಷೇಚಾಂಗಪೀಡಾ ಚ ಮೃತ್ಯುವತ್ । (ಹಿಲ್ಲಜಾತಕಕಾರ)

ಆರನೆ ವರ್ಷದಲ್ಲಿ ಮರಣದಂತಿರುವ ರೋಗ ಬಾಧೆಯನ್ನು ಆರರ ಚಂದ್ರ ಕೊಡುವನು.

ಅಲ್ಪಾಯು: ಸ್ಯಾತ್ ಕ್ಷೀಣ ಚಂದ್ರೇಽರಿಸಂಸ್ಥೇ ।
ಪೂರ್ಣೇ ಜಾತೋಽತೀವಭೋಗೀ ಚಿರಾಯು: ॥　　　　(ವೈದ್ಯನಾಥ)

ಆರರ ಕ್ಷೀಣ ಚಂದ್ರನು ಅಲ್ಪಾಯುಸ್ಸನ್ನೂ ಪೂರ್ಣ ಚಂದ್ರನು ದೀರ್ಘಾಯುಸ್ಸು ಬಹು ಭೋಗ ಸುಖಗಳನ್ನೂ ಕೊಡುವನು.

ವಾತಶ್ಲೇಷ್ಮಾದಿಕೇ ಚಂದ್ರೇ ವಿದ್ವೇಷೋ ಬಾಂಧವೈ: ಸಹ ।
ನೃಪಚೌರಾದ್ಯವೇತ್ಪೀಡಾ ಷಷ್ಠೇ ರೋಗ ಭಯಂಕರಮ್ ॥ (ಜ್ಯೋತಿಷಕಲ್ಪತರು)

ಆರರ ಚಂದ್ರ, ವಾತ ಕಫಾದಿದೋಷ, ಬಂಧು ಜನ ವಿರೋಧ, ರಾಜ ಚೌರ್ಯಪ್ರಸಂಗಗಳಿಂದ ಹೊಂದಿ ಬರುವ ಪೀಡೆ ಭಯಂಕರ ರೋಗ ದಾತ.

ಮಾತೃಶೀತೋನತದ್ವತ್　　　　(ಭಾವಚಿಂತಾಮಣಿ)

ರೋಗಭಾವನಂತೆ ಗುಣ ಕರ್ಮ ಮಾತೃಭಾವಕ್ಕಿರುವುದಿಲ್ಲ.

ಚಿಂತೆಯಿಂದ ಯಾವಾಗಲೂ ಕೂಡಿ ರೋಗ ಪೀಡಿತನಾಗುವನು. ಅಶಕ್ತ ಕುರೂಪಿ, ಕಾವಮಾತುರ, ನಿರ್ದಯ, ಕ್ರೋಧಿ, ನಿಷ್ಠುರ ಎಂಬ ಫಲ ಯುವನವುತ.

ಆರರ ಚಂದ್ರ ದೇಹಾರೋಗ್ಯದಾತನಲ್ಲ. ರೋಗವೃದ್ಧಿಕರ ಹೆಂಡತಿಯ ಮೂಲಕ ದುಃಖ ಹೊಂದುವನು. ಶುಭ ಚಂದ್ರನಾದರೆ ಅಲ್ಪ ಸ್ವಲ್ಪ ಲಾಭ ಹೊಂದುವನು. ವೃಶ್ಚಿಕ ಚಂದ್ರನಾದರೆ ಸುರಾಪಾಯಿ. ಇಂತಹರಿಂದ ಧನ ವ್ಯಯಗಳಾಗುವವು. ತುಂಬ ತೊಡಕು ಕಷ್ಟಗಳು ಉದ್ಯೋಗ ವ್ಯವಸಾಯಗಳಿಂದಾಗುವವು. ತುಂಬ ಶತ್ರುಗಳು ಆಗುವರು. ನ್ಯಾಯ ಮಾರ್ಗವಿರದೆ ಅಯುಶಸ್ವಿಯಾಗಿರುವನು ಶುಭ ಚಂದ್ರನಾದರೆ ಕೆಟ್ಟ ಫಲ ಕಡಮೆಯಾಗುವುದು. ನೌಕರಿಯಿಂದ ಬೆಳೆದು ಬರುವನು. ಅಧಿಕಾರ ಧೋರಣೆಯುವನಾಗಿರುವನು. ವೃಷಭ ಚಂದ್ರನಾಗಿದ್ದರೆ ಅಧಿಕಾರಯೋಗ ಹೊಂದುವನು. ಉಭಯರಾಶಿಯ ಚಂದ್ರ ಕಫೋಪದ್ರವ ದಾತ. ಕಫಕ್ಷಯದೋಷವಾಗುವುದು. ಸ್ಥಿರ ರಾಶಿಯ ಆರರ ಚಂದ್ರ ಮೂತ್ರರೋಗಜನಕ. ಭಗಂದರ ಅಥವಾ ಮೂಲವ್ಯಾಧಿ ವಿಕಾರಗಳಾಗುವವು. ವೃಷಭದ ಚಂದ್ರ ಕಂಠ ವಿಕಾರ ದೋಷದಾತೃ. ಕೆಮ್ಮು ಕಫ ಶ್ವಾಸ, ಶ್ವಾಸನಾಳದ ದಾಹ ವಿಕಾರ ಕೊಡುವನು. ಕರ್ಕಟಕದ ಚಂದ್ರ ಉದರ ದೋಷ, ಅಪಚನ ಅಗ್ನಿಮಾಂದ್ಯಗೊಳಿಸುವವ. ಚರರಾಶಿಯ ಚಂದ್ರ ಜಠರ ವಿಕಾರದೋಷಕೊಡುವವ. ಬಾಲ್ಯದಲ್ಲಿಯೇ ಈ ದೋಷ ಅಧಿಕವಾಗಿ ಉಂಟು ಮಾಡುವನು. ಈ ಚಂದ್ರ ಕೆಲಸಗಾರರು ಮತ್ತು ಕೆಲಸಗಳಲ್ಲಿ ಬಹುತ್ರಾಸ ಗೊಳಿಸುವನು. ಈ ತ್ರಾಸ ಸ್ಥಿರವಾಗಿರುವುದಿಲ್ಲ. ಎಂದು ಪಾಶ್ಚಾತ್ಯರು ಹೇಳಿರುವರು.

ಚಂದ್ರನ ವಿಷಯದಲ್ಲಿ ಶುಭ ಅಶುಭ ಈ ಎರಡೂ ಫಲಗಳು ಕಂಡು ಬರುವವು. ಕಫ ಶ್ವಾಸವಿಕಾರ ಉದರಾಗ್ನಿ ಅತಿಭಯಂಕರ ರೋಗ ಪೀಡೆಗಳ ಫಲ ಆರರ ಚಂದ್ರನಿಗೆ ಹೇಳಿರುವವು. ಚಂದ್ರ ರಕ್ತಕಾರಕ ಗ್ರಹ. ಈ ಗ್ರಹನು ರಕ್ತವನ್ನು ಕೆಡಿಸಿ ಬರುವ ಗ್ರಹ. ರಕ್ತದೂಷಿತವಾಗಿ ಉರಿತ ಉಷ್ಣಾಧಿಕ್ಯಗೊಂಡು ಬರುವಿಕೆಗಳಾಗುವವು. ಜಲಕಾರಕ ಗ್ರಹ ಇವನ ಪರಿ

ಣಾವು ಗಂಟಲು ಶ್ವಾಸನಾಳಗಳಲ್ಲಿ ಹೊಂದಿಬರುವವು. ಆರು ರೋಗಸ್ಥಾನ. ಈ ರೋಗ ಸ್ಥಾನವನ್ನು ಹೊಂದಿರುವ ಚಂದ್ರನು ಕಫಶ್ವಾಸ ವಿಕಾರಗಳನ್ನು ರಕ್ತವನ್ನು ಕೆಡಿಸಿ ಉಂಟು ಮಾಡುವನು. ಸ್ತ್ರೀರಾಶಿಗತನಾದ ಚಂದ್ರನು ರೋಗಾದಿ ಅಶುಭ ಫಲದಾತನಾಗುವನು. ವೃಷಭ ಕನ್ಯಾ ಮಕರ ರಾಶಿಗತನಾದಚಂದ್ರ ರಕ್ತವನ್ನು ಕೆಡಿಸುವವ. ಉಷ್ಣಾಧಿಕ್ಯಗೊಂಡು ಬರುವಿಕೆಯು ದೋಷ ವಿಕಾರವನ್ನು ದೇಹದಲ್ಲಿ ತೋರ ನನು. ಮೂಗು ಕಟ್ಟುವುದು. ಸೀನುವುದು, ಕೆಮ್ಮುವುದು, ಸಿಂಬಳ ಬರುವುದು. ಒಂದಿಗೆ ಗಂಟಲಲ್ಲಿ ಕಫ ಬರುವಿಕೆಗಳಾಗುತ್ತವೆ. ವೃಷಭ, ಕನ್ಯಾ, ಮಕರ ರಾಶಿಗಳು ಆರರ ಸಂಬಂಧ ಚಿಂತನೆ ಗೊಂಡಾಗ, ಧನುವಿನಿಂದ ಆರು ವೃಷಭ. ಈ ಚಂದ್ರ ಅಷ್ಟಮಾಧಿಪತ್ಯ ಗೊಳ್ಳುವನು. ಕನ್ಯಾ ಆರು ಆಗಲು ಮೇಷಲಗ್ನವಾಗ ಬೇಕಾಗುತ್ತದೆ. ಮೇಷಕ್ಕೆ ಸುಖಾಧಿಪತ್ಯ ಸಂಬಂಧದವನೆನಿಸುವನು. ಮಕರದ ಷಷ್ಟದ ಚಂದ್ರಸ್ಥಿತಿ ಸಿಂಹಲಗ್ನವಾಗ ಬೇಕಾಗುತ್ತದೆ. ಈ ಚಂದ್ರ ದ್ವಾದಶಾಧಿಪತ್ಯ ಸಂಬಂಧಗೊಳ್ಳುವನು. ರಾತ್ರಿ ಸೀನುವಿಕೆ ಮೂಗು ಕಟ್ಟುವಿಕೆಗಳಾಗುತ್ತವೆ. ರಾತ್ರಿ ಊಟವಾದ ಬಳಿಕ ಆರಂಭಿಸುವುದು. ಆದ್ದರಿಂದ ಈ ರೋಗದವರು ರಾತ್ರಿಯ ಮೊದಲೇ ಆಹಾರವನ್ನು ತೆಕ್ಕೊಳ್ಳಬೇಕು. ಇದರಿಂದ ಹಲವು ಬಾರಿ ಸೀನುವಿಕೆ ಕೆಮ್ಮುವಿಕೆಗಳು ಇರದ ಸುಖ ನಿದ್ರೆ ಹೊಂದಲವಕಾಶವಾಗುತ್ತದೆ. ಅನ್ಯಥಾ ಸ್ಥಿತಿಯಿಂದ ನಿದ್ರಾಭಂಗವಾಗುವುದು. ಮೇಷ ಸಿಂಹ ಧನು ರಾಶಿಗಳ ಆರರ ಚಂದ್ರ ರೋಗಿಗಳ ಶುಶ್ರೂಷೆಯನ್ನು ಮಾಡುವ ಸೂಲಗಿತ್ತಿಯರನ್ನು ನಿರ್ವಿಸುವನು. ಡಾಕ್ಟರರೂ ಈ ರಾಶಿಯವರಲ್ಲಿ ಕಾಣುವರು. ಮೇಷ ಸಿಂಹ ಧನು ರಾಶಿಗಳ ಸಂಪರ್ಕದ ಡಾಕ್ಟರರು ಮಾನವ ಜನಾಂಗದ ಸೇವೆಯನ್ನು ಉತ್ತಮ ಮನೋಗುಣ ಧರ್ಮದಿಂದ ಸಾಧಿಸುವರು ಜೀವರಕ್ಷಣೆಯು ಕರ್ಮ ಮಾಡುತ್ತಿರುವರು. ಸಂಪತ್ತನ್ನು ಚಿಂತಿಸದೆ ಜೀವರಕ್ಷಣೆಗಾಗಿ ರೋಗಿಗಳ ಸೇವಾ ಶುಶ್ರೂಷೆಗಳಿಗಾಗಿ ತಮ್ಮ ಸಂಪತ್ತನ್ನು ಸವೆಯಿಸಿ ಕರ್ಮ ಮಾರ್ಗದಿಂದಲೇ ಇರುತ್ತಾ ಯಶಸ್ವಿಗಳಾಗಿ ನೆಲಸಿ ಬರುವರು. ತಮ್ಮ ಕರ್ಮ ನಿಷ್ಠೆಯಿಂದ ನೆಲಸಿ ರೋಗಿಗಳ ಜೀವರಕ್ಷಣಾ ಕಾರ್ಯದಲ್ಲಿ ಲೀನ

ರಾಗಿರುವರು. ಮೇಷ ಸಿಂಹ ಧನುಸ್ಸುರಾಶಿಯು ಚಂದ್ರನವರಲ್ಲಿ ಪಾಕಶಾಸ್ತ್ರಾಭಿಜ್ಞರೂ ಕಾಣುವರು. ಬಾಲಗೆಯಲ್ಲಿ ರುಚಿಜ್ಞಾನ ಶಕ್ತಿಯೂ ಇರುತ್ತದೆ. ಆರರ ಚಂದ್ರನವರು ನಿಷ್ಕುರತೆ ಕ್ರೋಧಶೀಲತೆಯುವರೂ ಇರುತ್ತಾರೆ. ಇಂತಹರು ತಮ್ಮ ಮಾತು ವೇದವಾಕ್ಯವೆಂಬ ಅಹಂಭಾವ ಜಂಭಾನ್ವಿತರಾಗಿ ಸಮಾಜ ಕುಟುಂಬದಲ್ಲಿ ನೆಲಸಿರುತ್ತಾ, ತಮ್ಮ ಮಾತಿಗೆ ವಿರುದ್ಧವಾದಲ್ಲಿ ದೃಷ್ಟ ವರ್ತನೆಗೊಳ್ಳುವರು. ಕರ್ಕಾಟಕ, ಕುಂಭ, ಮಿಥುನ, ತುಲಾ ಲಗ್ನವಾಗಿ ಆರರ ಚಂದ್ರನಿದ್ದಲ್ಲಿ ಈ ಫಲ ತೋರಿ ಬರುತ್ತಿರುವುದು. ಆರರ ಚಂದ್ರ ಕರ್ಕಟಕ ವೃಶ್ಚಿಕ ಮೀನ ಗತನಾಗಿರುವನಾದರೆ ಶಾರೀರಿಕ ಮಾನಸಿಕ ಆರ್ಥಿಕ ತ್ರಾಸ ಮಾನಭಂಗ ಶತ್ರುತ್ವ ಘಟನೆಗಳನ್ನುಂಟು ಮಾಡುವನು. ಆರು ಮಾತೃಭಾವದ ಸಹೋದರಭಾವ ಇದರಿಂದಲೇ ಸೋದರ ಮಾವನ ದೋಷ ವಿಚಾರ ಹೇಳಿರುವರು. ಈ ಚಂದ್ರ ಪುರುಷ ರಾಶಿಯುವ ಅಧಿಕ ಶುಭ ಫಲದವನಾಗುವನು.

## ಸಪ್ತಮದ ಚಂದ್ರ

ಈರ್ಷ್ಯು: ಸ್ತ್ರೀ ಮುದೋ ಮದೇ (ವರಾಹ)

ಸಪ್ತಮದ ಚಂದ್ರ ಹೊಟ್ಟೆಗಿಚ್ಚಿನ ಕೆಲಸ ಸ್ತ್ರೀ ಕಾಮು ಗೊಳಿಸುವನು.

ಕ್ರಯೀ ವಿಕ್ರಯೀ ಚ ವರ್ಧತೇ ಽ ಸೌ ವಿಶೇಷಾತ್ (ಜಾಗೇಶ್ವರ)

ವಾಣಿಜ್ಯ ವೃತ್ತಿಯಿಂದ ಬೆಳೆಯಿಸುವನು.

ಚಾಂದ್ರೇ ಚ ಸಪ್ತಮೇ ಜಾತೋ ದುಃಖೀ ಕಷ್ಟೀ ಚ ವಂಚಕಃ।
ಕೃಪಣೋ ಬಹು ವೈರೀ ಚ ಜಾಯತೇ ಪರದಾರಿಕಃ॥ (ಕಾಶಿನಾಥ)

ಏಳರ ಚಂದ್ರ ದುಃಖ ಕಷ್ಟ ವಂಚನೆ ಲೋಭ ಬಹು ಶತ್ರುಜನ ಪರ ಸ್ತ್ರೀರತಿಗಳನ್ನು ಉಂಟು ಮಾಡುವನು.

ಈರ್ಷ್ಯು: ಪರಂಭೋ ಮದನಾತುರೋಽಸ್ಯೋ।
ನಯೋಂಗಹೀನೋಽಸ್ತಗತೇಹಿಮಾಂಶೌ॥ (ಜಯದೇವ)

ಏಳರ ಚಂದ್ರ ಮತ್ಸರ, ಅಹಂಭಾವಿ, ಕಾಮಾತುರ, ಧನಹೀನ, ಅಧರ್ಮಿ, ಅಂಗಹೀನತೆ ಎಂಬ ಫಲದವ.

ನರೋಭವೇತ್ ಕ್ಷೀಣಕಲೇವರಶ್ಚ ಧನೇನ
ಹೀನೋ ವಿನಯೇನ ಚಾಸ್ತೇ ಕ್ಷೀಣಶರೀರೀ ॥ (ಬೃಹದ್ಯವನ)

ಕ್ಷೀಣ ಚಂದ್ರ ಸಪ್ತಮದಲ್ಲಿದ್ದರೆ ಕ್ಷೀಣ ದೇಹ, ಧನವಿನಯ ವಿರಹಿತನಾಗುವನು.

ಧೂರ್ತ್ತೋ ನರಃ ಸ್ಯಾದ್ ವಣಿಜ್ಯಕರ್ಮನಿರತೋ ಮಿಷ್ಟಭುಕ್ ಲುಬ್ಧಚೇತಃ ॥ (ಭಾವಚಿಂತಾಮಣಿ)

ವ್ಯಾಪಾರ ಮಾರ್ಗದಲ್ಲಿದ್ದು ಧನಿಕನಾಗುವನು. ಮಿಷ್ಟಾನ್ನ ಉಣ್ಣುವನು. ಲೋಭಿಯಾಗುವನು.

ಯಾಮಾಕಾಂತಾಗಾರಂ ಗತವತಿ ಮೃಗಾಂಕೇ ಜನುಷಿಚ ಕರಾಕ್ರಾಂತೇಽಕಸ್ಮಾದ್ಧನಮಪಿ-
ನಿಜಸ್ತ್ರೀ ಜನಕುಲಾಸ್ ॥
ಅನಂಗ ಪ್ರಾಬಲ್ಯಂ ನಗರನಾರೀರತಿಕಲಾ ಪ್ರವೀಣತ್ವಂ ಧೀರಧ್ವನಿಮತೀವ ಪ್ರಭವತಿ ॥
(ಜೀವನಾಥ)

ಏಳರ ಚಂದ್ರನು ಹೆಂಡತಿಯ ಕೈ ಹಿಡಿದ ಬಳಿಕ ಆಕಸ್ಮಿಕ ಧನಲಾಭ ಹೊಂದುವನು. ದೊಡ್ಡ ಮನೆತನದ ಸ್ತ್ರೀಪ್ರಾಪ್ತಿಯಾಗುವುದು. ಕಾಮ ಬಲಾನ್ವಿತನಾಗಿ ಶ್ರೇಷ್ಠ ಕುಟುಂಬದ ನಾಗರಿಕ ತನದ ಸ್ತ್ರೀಯನ್ನು ರತಿಕಲಾ ಪ್ರವೀಣತೆಯಿಂದ ಹೊಂದಿರುವನು. ಧೈರ್ಯವಾಣಿಯಿಂದ ಅತಿಬುದ್ಧಿವಂತನಾಗಿರುವನು.

ಜಾಮಿತ್ರೇ ಚಂದ್ರಶುಕ್ರೌ ಚ ಬಹುಪತ್ನ್ಯೋ ಭವಂತಿ ॥ (ಹಿಲ್ಲಜಾತಕಕಾರ)

ಸಪ್ತಮದಲ್ಲಿ ಚಂದ್ರ ಶುಕ್ರ ಸ್ಥಿತಿಯಿಂದ ಬಹು ಪತ್ನೀಯೋಗವಾಗುವುದು.

ಸಪ್ತಮೇ ಮಾತೃನಾಶಂಚ ವರ್ಷೇ ತ್ರಿಪಂಚಮಿತೇ ಧ್ರುವಮ್ ॥ (ಹಿಲ್ಲಜಾತಕ)

ಏಳರ ಚಂದ್ರನು ಹದಿನೈದನೆ ಪ್ರಾಯದಲ್ಲಿ ಮಾತೃನಾಶ ಕೊಡುವನು.

ಸ್ತ್ರೀನಾಶಕೃತ್ಮೃಗಗುಣೈರಪಿ ಇಂದುಃ (ಬೃಹದ್ಯವನ)

ಮೂವತ್ತ ನಾಲ್ಕನೆ ಪ್ರಾಯದಲ್ಲಿ ಹೆಂಡತಿಗೆ ಮೃತ್ಯು ಕೊಡುವನು.

ಸಪ್ತಮದ ಚಂದ್ರನಿದ್ದರೆ ರೋಗವಿಲ್ಲದವ. ಸಂಪತ್ತನ್ನು ಸಂಗ್ರಹಿಸುವ ಪ್ರಸಿದ್ಧಕೀರ್ತಿಗೊಳ್ಳುವನು ಸ್ವರೂಪ ಲಾವಣ್ಯದವನು ಎಂದು ಯವನ ಮತ.

' ಶಾಸ್ತ್ರಕಾರರು ಸೀರೆಲ್ಲಿ ಚಂದ್ರನಿದ್ದರೆ ವಿವಾಹದಿಂದ ಇಲ್ಲವೆ ವಾರೀಸಿನ ಮೂಲಕ ಧನಲಾಭ ತುಂಬ ಹೊಂದುವನು. ಈ ಚಂದ್ರ ಶುಭದೃಷ್ಟ ಮಿತ್ರ ಸ್ವಗೃಹ ಉಚ್ಚಗತನಾಗಿರುವನಾದರೆ ಹೇರಳ ಧನಲಾಭವಾಗುವುದು. ಜಲಪ್ರಯಾಣ, ವ್ಯಾಪಾರ, ಸಟ್ಟಾ ನೀರಿನಿಂದ ಉಂಟಾಗುವ ವಸ್ತುಗಳಿಂದ ಚೆನ್ನಾದ ಲಾಭಗಳಿಸುವನು. ಇಪ್ಪತ್ತನಾಲ್ಕು ಯಾ ಇಪ್ಪತ್ತೆಂಟುಪ್ರಾಯ ಕಾಲ ದಾಂಪತ್ಯವಾಗುವುದು. ಅಸ್ಥಿರ ಪ್ರೇಮದವನಿರುವನು. ಪಾಲು ಗಾರಿಕೆಯು ಮೂಲಕ ಚೆನ್ನಾದ ಲಾಭವಾಗುವುದು. ಅಶುಭ ದೃಷ್ಟನಾಗಿ ಈ ಚಂದ್ರ ಇದ್ದರೆ ಆತನಿಗೆ ಹೆಂಡತಿಯು ಮೂಲಕ ಹೆಚ್ಚು ಕಷ್ಟತಾಪ ಗೊಳ್ಳುವನು ಎಂದು ಹೇಳಿರುವರು.

ಜಯದೇವ ಬೃಹದ್ಯವನ ಹಿಲ್ಲಜಾತಕಕಾರರ ಮತ ಸ್ತ್ರೀರಾಶಿಯಲ್ಲಿ ಹೊಂದಿಬರುವುದು. ಅನ್ಯ ಫಲಗಳು ಅನ್ಯರಾಶಿಯ ಸಂಪರ್ಕದವುಗಳಾಗಿರು ತ್ತವೆ. ಸಪ್ತಮದ ಚಂದ್ರನಲ್ಲಿ ವೃಷಭದ ಚಂದ್ರನು ವಿವಾಹಾನಂತರ ಭಾಗ್ಯೋ ದಯದಾತನು. ವೃಶ್ಚಿಕ ಲಗ್ನವಾಗಿ ಭಾಗ್ಯಾಧಿಪತ್ಯ ಈ ಚಂದ್ರನಿಗಿರುತ್ತಿದ್ದು ವಿವಾಹಾನಂತರ ಅಭಿವೃದ್ಧಿಯ ಯೋಗವಾಗುವುದು. ಹೆಂಡತಿಯು ಬಾಳಿರುವ ವರೆಗೆ ಭಾಗ್ಯ ಸಂಪತ್ತಿರುವುದು. ಆಕೆ ಮಡಿದ ಬಳಿಕ ಭಾಗ್ಯ ಸಂಪತ್ತು ಇಳಿದು ಬರುವುದು. ಉದ್ಯೋಗದಲ್ಲಿ ಅಸ್ಥಿರತೆ ಅನೇಕ ವ್ಯವ ಸಾಯ ನೌಕರಿಗಳೂ ಆಗುವವು. ಅನ್ಯ ಸ್ತ್ರೀರಾಶಿಗಳಲ್ಲಿ ಹೆಂಡತಿಯು ಕಪ್ಪು ಬಣ್ಣ ಕೃಶ ಅಶಕ್ತ ಶರೀರ ಸ್ಥಿತಿ ತಲೆಕೂದಲು ಅಂದವಾಗಿದ್ದು ಗಿಡ್ಡ ಗುಂಗುರ ಹಟವರ್ತನೆ ಸಿಡುಕು ಗೊಂಡಿರುವಿಕೆ ಕುಟುಂಬವನ್ನು ಚೆನ್ನಾಗಿ ನಡೆಯಿಸುವಿಕೆ, ಅತಿಥಿ ಅಭ್ಯಾಗತರನ್ನು ಆದರಾತಿಥ್ಯ ಗೊಳ್ಳುವಿಕೆಯವಳಾ ಗಿರುವಳು. ಕುಟುಂಬ ಜೀವನದಲ್ಲಿ ತುಂಬ ಕಷ್ಟ ಹೊಂದುವಳು. ಮಕ್ಕಳು ಆಗಿಯೂ ಬಾಳದಿರುವಿಕೆಯೂ ಗರ್ಭಪಾತಾದಿಗಳೂ ಆಗುವವು. ಹೆಣ್ಣು ಮಕ್ಕಳು ಮಾತ್ರ ಇರುವವರೂ ಕಾಣುವರು. ಮಕ್ಕಳಿಲ್ಲದೆ ದೇಹ ಕಷ್ಟ ಪೀಡೆಯನ್ನು ಹೊಂದುವಿಕೆಯೂ ಆಗುವುದು. ಸ್ತ್ರೀರಾಶಿಯಲ್ಲಿ ಚಂದ್ರ ಪುರುಷನಿಗಿದ್ದು ಹೆಂಡತಿಯು ಲಗ್ನ ಸ್ತ್ರೀರಾಶಿಯಾಗಿ ಚಂದ್ರಲಗ್ನ ಯಾ ಸಪ್ತ ಮಗತನಾಗಿದ್ದರೆ. ಮಹತ್ವದ ಕೆಲಸವನ್ನು ಸಾಧಿಸಲು ಹೆಂಗುಸನ್ನು ಪರ

ರಲ್ಲಿಗೆ ಹೋಗುವಂತೆ ಮಾಡುವುದು ಇದೆ. ಇಂತಹರೂ ಹಲವರು ಕಾಣು ವರು. ಸಪ್ತಮದ ಪುರುಷ ರಾಶಿಯ ಚಂದ್ರ ಮೂವತ್ತೈರು ಪ್ರಾಯದ ವರೆಗೆ ಕರ್ಮದಲ್ಲಿ ಸ್ಥಿರತೆಗೊಳಿಸುವನಲ್ಲ. ಅನೇಕ ವ್ಯವಸಾಯಗೋಳ್ಪ್ವಿಕೆ ಸುತ್ತಾದಿಗೊಂಡು ನೆಲಸುವಿಕೆಗಳಾಗುತ್ತಿರುವವು. ಜನ ಸಮುದಾಯ ದಲ್ಲಿ ಸೇರದೆ ಸ್ವೇಚ್ಛಾವರ್ತನೆಗಳಾಗುವವು. ಸಾರ್ವಜನಿಕ ಕಾರ್ಯದಲ್ಲಿ ನೆಲಸುವನು. ಹೆಂಡತಿಯು ಒಳ್ಳೆಯವಳಾಗಿರುವಳು ಸಾಧಾರಣವಾದ ಬಿಳಿ ಬಣ್ಣ ತಲೆ ಕೂದಲು ಉದ್ದವಾಗಿರುವುದು. ಅಥವಾ ದಪ್ಪವಾಗಿ ತುಂಬಿದ ಕೂದಲಿನವಳಾಗಿರುವಳು. ಮೇಷ ಮಿಥುನ ತುಲಾಗಳ ಚಂದ್ರ ಉದ್ದವಾದ ಮುಖ ಚೆಲುಗೊಂಡಿರುವಿಕೆಗಳಾಗುವವು ಸಿಂಹ ಧನುಗಳ ಚಂದ್ರ ವರ್ತು ಲಾಕೃತಿಯ ಹಸನ್ಮುಖಗೊಂಡು ಚೆಲುವನ್ನು ನಿರ್ವಿಸುವನು. ಕುಂಭದ ಚಂದ್ರ ಮುಖದಲ್ಲಿ ಆಕರ್ಷಕತೆ ಬೀರುವವನಲ್ಲ. ಗಂಡನ ಆಜ್ಞಾನುವರ್ತಿ ಯಾಗಿರುವಳು. ಆಟ ವಿಲಾಸಾನಂದ ಸ್ವಭಾವ ಮನೋವೃತ್ತಿಯವಳು ಹೆಂಡತಿ. ಸಮಾಜದಲ್ಲಿ ಪ್ರೀತಿ ತುಂಬಿರುವಳು. ಉದಾರಳೂ ಖರ್ಚಿನ ವಳೂ ಉತ್ತಮ ಬಟ್ಟೆ ಬರೆ ವೇಷಭೂಷಣಗಳಲ್ಲಿ ಆಸಕ್ತಳಾಗಿದ್ದು ವಿಲಾಸ ಜೀವನದವಳಾಗಿರುವಳು. ಸಪ್ತಮದ ಚಂದ್ರನಿದ್ದಲ್ಲಿ ಆಹಾರ ವಸ್ತು ದವಸ ಧಾನ್ಯಗಳ ಅಂಗಡಿ ಹಾಲಿನ ವ್ಯವಸಾಯ ಹೋಟೆಲು, ಬೇಕರಿ, ಮದ್ದಿನ ವ್ಯಾಪಾರ ಕಮಿಶನ ಏಜಂಟರು, ವಿಮಾ ವ್ಯವಸಾಯ ಮಸಾಲೆಗಳ ವಸ್ತು ಹಪ್ಪಳ ಬೆಣ್ಣೆ ತುಪ್ಪ ಮಜ್ಜಿಗೆ ವಾರಿಯಲ್ಲಿ ಆಹಾರ ವಸ್ತುಗಳನ್ನು ಹೊತ್ತು ಮಾರುವಿಕೆಗೊಂಡು ವೃತ್ತಿ ಗೊಳ್ಳುವವರೂ ಕಾಣುವರು. ದುರಸ್ತಿಯ ಕೆಲಸ ಮಾಡುವ ರಿಪೇರಿಯವರೂ ಕಾಣುವರು. ಸ್ತ್ರೀರಾಶಿಯ ಚಂದ್ರ ಕಾಮುಕತನ ವ್ಯಭಿಚಾರ ಕಾರ್ಯಗೊಳಿಸುವವ. ಪುರುಷ ರಾಶಿಯ ಚಂದ್ರ ತನ್ನ ಹೆಂಡತಿಯ ಮೂಲಕ ಸುಖ ಭೋಗಾಸಕ್ತಿ ಕೊಡುವವನಾಗು ವನು. ಸಪ್ತಮದಿಂದ ಕಳತ್ರ ವಿಚಾರ ಚಿಂತನೀಯ. ಈ ಕಳತ್ರ ಸ್ಥಾನದ ಚಂದ್ರ ಪುರುಷ ರಾಶಿಯವ ಶುಭ ಫಲಾಧಿಕ್ಯ ಕೊಡುವನು.

**ಅಷ್ಟಮದಚಂದ್ರ**

ಬಹುಮತಿ ವ್ಯಾಧ್ಯರ್ದಿತಶ್ಚಾಷ್ಟಮೇ ॥ (ವರಾಹ)

ಅಷ್ಟಮದಲ್ಲಿ ಚಂದ್ರನಿದ್ದರೆ ಬಹು ಬುದ್ಧಿವಂತ ವ್ಯಾಧಿ ಪೀಡಿತ ಶರೀರನು.

ಕೃಷ್ಣಪಕ್ಷೇ ದಿವಾ ಜಾತಃ ಶುಕ್ಲಪಕ್ಷೇ ಯದಾನಿಶಿ ।
ತದಾಷಷ್ಠಾಷ್ಟಗಶ್ಚಂದ್ರಃ ಮಾತೃವತ್ಪಾತಿ ಬಾಲಕಂ ॥ (ಆರ್ಯಗ್ರಂಥಕಾರ)

ಕೃಷ್ಣ ಪಕ್ಷದಲ್ಲಿ ಹಗಲೂ ಶುಕ್ಲ ಪಕ್ಷದಲ್ಲಿ ರಾತ್ರಿ ಜನನವಾಗಿ ಆರು ಎಂಟರಲ್ಲಿ ಚಂದ್ರನು ಇದ್ದರೆ ತಾಯಂತೆ ಸಂರಕ್ಷಕನಾಗುವನು.

ಅಷ್ಟಮೇತಾರಕಾನಾಥೋ ದೀನೋಽಲ್ಪಾಯುಃ ಸಕಷ್ಟಕಃ ।
ಪೃಗಲ್ಭಶ್ಚ ಕೃಶಾಂಗಶ್ಚ ಪಾಪ ಬುದ್ಧಿರ್ಭವೇನ್ನರಃ ॥ (ಕಾಶಿನಾಥ)

ಎಂಟರಲ್ಲಿ ಚಂದ್ರನಿದ್ದರೆ ಬಡತನ ಗೋಂಡವನೂ ಅಲ್ಪಾಯುಷ್ಯನವನೂ ಕಷ್ಟವನ್ನನುಭವಿಸುವವನೂ ಜ್ಞಾನಿಯೂ ಕೃಶ ಶರೀರನೂ ಪಾಪ ಬುದ್ಧಿ ಯುವನೂ ಆಗುವನು.

ಸೋದ್ವಿಗ್ನಚಿಂತಾಮಯಕಾರ್ಶ್ಯನಿಃಸ್ವೋ ।
ಭೂಪಾಲಚೌರಾಪ್ತಭಯೋಽಷ್ಟಮೇಽಬ್ಜೇ ॥ (ಜಯದೇವ)

ದುಃಖಿತನೂ ಚಿಂತಾರೋಗಗೊಂಡು ಕೃಶ ಶರೀರನೂ ದರಿದ್ರನೂ ರಾಜ ಮತ್ತು ಕಳ್ಳರ ಭಯ ಹೊಂದುವವನೂ ಎಂಟರಲ್ಲಿ ಚಂದ್ರನಿದ್ದರೆ ಆಗುವನು.

ಧ್ರುವಂ ನೇತ್ರರೋಗೀ ತಥಾ ಶೀತಪೀಡಾ ತಥಾ ವಾಯುರೋಗೀ ಶರೀರೇ ಭವೇಯುಃ ।
ಕ್ಷಣಂ ನೀಯತೇ ತಸ್ಯ ಮೂರ್ಛಾಕ್ಷಣಸ್ಯಾದ್ಯದಾ ಮೃತ್ಯುಗಶ್ಚಂದ್ರಮಾ
ವೈಜನಾನಾಮ್ ॥ (ಉಪಯಭಾಸ್ಕರ)

ಕಣ್ಣ ರೋಗಿ ನಿಶ್ಚಿತ ಅಂತೆಯೇ ಶೀತ ಪೀಡೆಯೂ ವಾಯುರೋಗಗಳೂ ದೇಹದಲ್ಲಿ ನಿಶ್ಚಿತವಾಗಿ ಉಂಟಾಗುವವು. ಎಂಟರ ಚಂದ್ರ ಕ್ಷಣ ಕ್ಷಣದಲ್ಲಿ ಮೂರ್ಛಾರೋಗ ಕೊಡುವನು.

ರಣೋತ್ಸುಕಸ್ತ್ಯಾಗ ವಿನೋದ ವಿದ್ಯಾ ಶೀಲಃ ಶಶಾಂಕೇ ಸತಿ ರಂಧ್ರಯಾತೇ ॥
(ವೈದ್ಯನಾಥ)

ಚಂದ್ರನು ಅಷ್ಟಮದಲ್ಲಿದ್ದರೆ ಯುದ್ಧ ಜಗಳಗಳಲ್ಲಿ ಉತ್ಸುಕ ತ್ಯಾಗಿ ವಿನೋದ ವಿದ್ಯಾಶೀಲ.

ಅಷ್ಟಮೋ ದಿವಸೇ ವರ್ಷೇ ತನ್ಮಿತೇಹಾಯನೇ ಮೃತೇ ॥ (ಹಿಲ್ಲಜಾತಕ)

ಎಂಟನೆ ದಿವಸ ಯಾ ಮಾಸ ಅಥವಾ ವರ್ಷದಲ್ಲಿ ಮರಣದಾತ.

ಹಿಮಗುಃ ಷಡಬ್ದೇನಾಶನಮ್ ॥ (ಬೃಹದ್ಯವನ)

ಆರನೆ ವರುಷ ವ್ಯಕ್ತಿ ಫಲ ಕೊಡುವನು.

ಎಂಟರ ಚಂದ್ರನಿದ್ದಲ್ಲಿ ಆತ ನಿತ್ಯರೋಗಿ ದುಃಖಿತ ಕೋಪದನ ದುರಾಗ್ರಹಿ, ದುರ್ಜನ ಪೀಡಿತ, ದಯಾರಹಿತನಾಗಲು ಅವಕಾಶವಿರುತ್ತದೆ. ದೇಶತ್ಯಾಗವಾಗುವ ಅವಕಾಶವಿರುತ್ತದೆ. ಪಾಪಕ್ಷೇತ್ರ ಪಾಪಗ್ರಹಯುಕ್ತ ಎಂಟರ ಚಂದ್ರನಾಗಿದ್ದರೆ ಅನಿಷ್ಟಯೋಗವೆನಿಸುವುದು ಎಂದು ಯವನ ಜಾತಕಕಾರರ ಮತ.

ಪಾಶ್ಚಾತ್ಯರು ಎಂಟರ ಉಚ್ಚದ ಚಂದ್ರ ಮೃತ್ಯುಪತ್ರ ಯಾ ವಾರೀಸು ಸಂಪತ್ತು ವಿವಾಹದಿಂದ ಸಂಪತ್ತಿನ ಲಾಭ ಫಲದವನೆಂದೂ ಚಂದ್ರನಿಗೆ ಪಾಪಕ್ಷೇತ್ರ ಪಾಪದೃಷ್ಟಿ ಸಂಬಂಧ ಗೊಂಡಿರುವನಾದರೆ. ಲಾಭಫಲ ಹೊಂದುವುದಿಲ್ಲವೆಂದೂ ಹೇಳಿರುವರು.

ನಮ್ಮ ಪೂರ್ವೀಯರುಗಳಲ್ಲಿ ಜಯದೇವ ಕಾಶಿನಾಥರುಗಳು ಪ್ರಗಲ್ಭ ಎಂಬ ಶುಭ ಫಲದೊಂದಿಗೆ ಅನ್ಯ ಅಶುಭ ಫಲ ಎಂಟರ ಚಂದ್ರನ ಫಲ ಹೇಳಿರುವರು. ಈ ಎಂಟರ ಫಲಗಳು ಒಂದೇ ರಾಶಿಯ ಚಂದ್ರನಿಂದ ಹೊಂದಿಬರಲು ಶಕ್ಯವಿಲ್ಲ. ಪುರುಷ ರಾಶಿಯಲ್ಲಿರುವ ಚಂದ್ರ ಪ್ರಗಲ್ಭತೆಯ ಫಲದವ. ಸ್ತ್ರೀರಾಶಿಯ ಚಂದ್ರನಿಗೆ ಅನ್ಯಫಲಗಳು ಹೊಂದುವವು. ಜಯದೇವ ನಿಃಸ್ವ ಎಂಬ ಸಂಪತ್ತಿರದ ಬಡವನೆಂದು ಹೇಳಿ ರಾಜನಿಂದಲೂ ಚೋರನಿಂದಲೂ ಭಯವೆಂಬ ಈ ಫಲಗಳನ್ನು ಬೃಹದ್ಯವನನೂ ತಿಳಿಸಿರುವುದರಿಂದ ಈತನು ಶ್ರೀಮಂತನಾಗುವನು. ಇದರಿಂದ ಚೋರಭಯಾವಕಾಶ ರಾಜಭಯಾವಕಾಶವಾಗಲು ಶಕ್ಯವಿದೆ. ಇಂತೆಯೇ ಬಡವನಿದ್ದೂ ಆತನಿಗೆ ಚೆಲು ಹೆಂಡತಿ ಇದ್ದರೆ ರಾಜ ಭೀತಿಗೆ ಒಳಗಾಗುವಿಕೆಯಾಗುವುದು. ಸ್ತ್ರೀರಾಶಿಯಲ್ಲಿರುವ ಚಂದ್ರ ಶೀತ ವಾಯುರೋಗ ಮೂರ್ಛಾಪಸ್ಮಾರ ವಾಯುಕನಾಗುವನು. ಕೃಷ್ಣಪಕ್ಷ ಶುಕ್ಲಪಕ್ಷಗಳ ಚಂದ್ರನನ್ನು ಕೊಟ್ಟು ದಿವಾ ಜನನ ಕೃಷ್ಣಪಕ್ಷ ರಾತ್ರಿ ಶುಕ್ಲಪಕ್ಷ ಜನನ ಗೊಂಡು ಆರು ಎಂಟರ ಚಂದ್ರ ತಾಯಂತೆ ಸಂರಕ್ಷಕನೆಂಬ ಫಲದ್ದಾಗಿದೆ. ಈ ವಿಷಯದಲ್ಲಿ ನಾವು ಚಂದ್ರನ ಪರಿಭ್ರಮಣೆಯನ್ನು ಕಾಣುವುದು ಉಚಿತ. ಕೃಷ್ಣಪಕ್ಷದಲ್ಲಿ ಹಗಲು ಎಂದು ಚಿಂತಿಸುವಾಗ ರವಿಯುಸ್ಥಿತಿ ಲಗ್ನದ್ವಾದಶದಿಂದ ಸಪ್ತಮದವರೆಗೆ

ಎಂಟರ ಚಂದ್ರಗೊಳ್ಳಲು ಬೇಕಾಗುವುದು. ಶುಕ್ಲಪಕ್ಷದಲ್ಲಿ ರಾತ್ರಿ ಜನನವಾಗಿ ಎಂಟರ ಚಂದ್ರನನ್ನು ಹೊಂದಲು ದ್ವಿತೀಯದಿಂದ ಸಪ್ತಮದ ವರೆಗಿನ ಅನುಕ್ರಮದ ರವಿಸ್ಥಿತಿ ಗೊಳಿಸಬೇಕಾಗುತ್ತದೆ. ಕೃಷ್ಣಪಕ್ಷದಲ್ಲಿ ವಿಲೋಮವಾಗಿ ಹನ್ನೆರಡು, ಹನ್ನೊಂದು, ಹತ್ತು, ಒಂಬತರಲ್ಲಿರುವ ರವಿಯು ಸ್ಥಿತಿ. ಶುಕ್ಲಪಕ್ಷದಲ್ಲಿ ಅನುಕ್ರಮವಾಗಿ ಎರಡನೆ ಭಾವದಿಂದ ಸಪ್ತಮದ ವರೆಗಿನ ರವಿಯು ನೆಲಸುವನು. ಯೋಗ ಚಿಂತನೆಗೊಂಡಾಗ ರವಿ ಚಂದ್ರರ ಭಾವಾಧಿಪತ್ಯಯೋಗ ಚೆನ್ನಾಗುತಿದ್ದು ದೀರ್ಘಾಯುಷ್ಯಿನ ಫಲದ್ದಾಗುತ್ತದೆ. ಚಂದ್ರ ರವಿಗಳು ಮಿತ್ರೋತ್ತಮಕಾರಕತ್ವಾದಿ ಸಂಪರ್ಕದಿಂದ ಶುಭಸಂಪರ್ಕದವರಾಗಿ ಶುಭಫಲಯೋಗವಾಗುತ್ತದೆ. ಅಮಾವಾಸ್ಯೆ ಪೂರ್ಣಿಮೆಗಳ ಚಂದ್ರನ ಯೋಗ ಆರು ಎಂಟರಲ್ಲಿ ಹೊಂದಿದಾಗ ರವಿಯು ಹಗಲಿರುಳ ವಿಷಯವನ್ನು ಮನದಲ್ಲಿರಿಸುವುದು ಅಗತ್ಯ ಎಂಟರ ಚಂದ್ರನು ಇದ್ದಲ್ಲಿ ಮನೆಯಲ್ಲಿ ಮದ್ದಿನ ಉಪಯೋಗದವರ ಇರುವಿಕೆ ಅಥವಾ ವೈದ್ಯಕೀಯ ಕರ್ಮದವರ ಸ್ಥಿತಿ ಫಲಗಳಲ್ಲೊಂದನ್ನು ಉಪದೇಶಿಸಬಹುದಾಗಿದೆ. ಮೇಷ ಸಿಂಹ ಧನುಗಳ ಚಂದ್ರ ವೃದ್ಧ್ಯಾಷ್ಟಕದಲ್ಲಿ ವಾಕ್ಕಿಳಿಂದ ತಪ್ಪಿಸ ಫಲಕೊಡುವನು.

ಯಾವುದಾದರೂ ರೀತಿಯಿಂದ ಹಣವನ್ನು ಸಂಪಾದಿಸುವನು. ತನ್ನ ಉದ್ಯಮದಲ್ಲಿ ಸ್ಥಿರತೆ ಇರುತ್ತದೆ. ಇದರಿಂದ ಯಶಸ್ವಿಯಾಗುವನು. ಉದಾರತನ ತೋರುವನು. ಈ ಉದಾರತನ ತನ್ನ ಲಾಭಕ್ಕಾಗಿಯೇ ಇರುತ್ತದೆ. ಅನ್ಯಥಾ ಇರುವುದಿಲ್ಲ. ದೇಹ ಪ್ರಕೃತಿ ಸಾಧಾರಣ ಉತ್ತಮವಾಗಿರುತ್ತದೆ. ವೃಷಭ ತುಲಾ ಕುಂಭ ಚಂದ್ರನು ಅಷ್ಟಮದಲ್ಲಿ ಇದ್ದರೆ ಹೆಂಡತಿಯು ಒಳ್ಳೆಯವಳಾಗಿರುವಳು. ಹೀಗೆ ಈ ಆರು ರಾಶಿಗಳ ಚಂದ್ರನ ಫಲ ಪ್ರಾಮುಖ್ಯದ್ದಾಗಿರುವುದು. ಹೆಂಡತಿಯು ಹರಟೆಗಾರ್ತಿ ಕಿರಿ ಕಿರಿಯವಳು ಇದ್ದರೂ ಮನೆಯ ಗುಟ್ಟನ್ನು ಬಿಡುವವಳಲ್ಲ. ಅನ್ಯರ ಮನೆಗೆ ಹೋಗಿ ಪಂಚಾಯತಿ ಬೋರ್ಡ ಸದಸ್ಯೆಯಾಗಿರುವವಳಲ್ಲ. ಗಂಡನಿಗೆ ಉಚಿತ ಸಲಹೆನೀಡುವಳು. ಅಭಿಮಾನ ದೃಷ್ಟಿ ತುಂಬಿರುವಳು. ಕಷ್ಟ ದುಃಖಗಳನ್ನೂ ಮೆಚ್ಚದವಳಿದ್ದರೂ ಅತಿ ಮಾನಾಸಕ್ತಿ ಗೊಂಡಿರುವಳು. ಗಂಡನನ್ನು ಬಿಟ್ಟು ಅನ್ಯರನ್ನು ನಂಬುವಳಲ್ಲ. ಕರ್ಕಟಕ ವೃಶ್ಚಿಕ ಧನು ಮೀನ ಇವುಗಳಲ್ಲೊಂದು ಲಗ್ನವಾಗಿ ಎಂಟರ

ಚಂದ್ರನಿದ್ದರೆ ಯೋಗಾಭ್ಯಾಸ ಉಪಾಸನೆ ವೇದಾಂತಗಳಲ್ಲಿ ಆಸಕ್ತಿ ಇರುವುದು. ಕಾಯಿಲೆಗೊಂದಾಗ ಸಾಲಗೊಂಡು ಉಣ್ಣುವುದಿಲ್ಲ. ಎಂಟರ ಯುಗ್ಮ (ಸ್ತ್ರೀ)ರಾಶಿಯು ಚಂದ್ರ ಗುಟ್ಟನ್ನು ಬಯಲುಗೊಳಿಸುವವ. ದೇಹಾರೋಗ್ಯಕ್ಕೆ ತೊಡಕು ಕೊಡುವವ. ನಲುವತ್ತನಾಲ್ಕನೆ ಪ್ರಾಯಕ್ಕೆ ಬರುವಾಗ ಭೂಸಂಪತ್ತು ಗೊಳಿಸುವನು. ಯಾವನೇ ಇರಲಿ ಎಂಟರಲ್ಲಿ ಚಂದ್ರನು ಇದ್ದರೆ ಆತನು ಪಾಪಕರ್ಮಕ್ಕೆ ಛೀತ್ರಗೊಳ್ಳುವನು. ದೀರ್ಘಾಯುಸ್ಸಿನವರೂ ಕಾಣುವರು. ಎಂಟರ ಚಂದ್ರನವರು ಉಪಾಸನೆ ಯೋಗಾಭ್ಯಾಸ ವೇದಾಂತಗೊಂಡವರಲ್ಲಿ ಇವರಿಂದಲೇ ಮನೆತನಕ್ಕೆ ಅದೊಂದು ಶಾಪದಂತಾಗಿ ಯಾ ಸ್ವಪ್ರತಿಷ್ಠೆಯು ಕರ್ಮದೀದ ಒಡಕು ಸಂಭವಿಸುತ್ತದೆ. ಒಡಕಿನೊಂದಿಗೆ ಬಂಧುವರ್ಗದವರ ಸಂಪತ್ತನ್ನು ದೋಚುವ ಉಣ್ಣುವವರಾಗಿ ನ್ಯಾಯ ನೀತಿಗಳಿಂದ ತಪ್ಪಿದ ಕುಲಗಡುಕರೂ ಆಗಿ ಕಾಣುವರು. ಈ ಚಂದ್ರ ಮನೋಕಾರಕನಾಗಿ ಮನಸ್ಸೇ ಇಂತಹುದಾಗಿ ಬೆಳೆದು ಕಾಣುತ್ತದು.

## ನವಮದ ಚಂದ್ರನ ಫಲ

ಸೌಭಾಗ್ಯಾತ್ಮಜ ಮಿತ್ರ ಬಂಧು ಧನಭಾಕ್ ಧರ್ಮಸ್ಥಿತೇ ಶೀತಗೌ । (ವರಾಹ)

ಚಂದ್ರ ನವಮದಲ್ಲಿದ್ದರೆ ಸೌಭಾಗ್ಯ ಪುತ್ರ ಮಿತ್ರ ಬಂಧು ಧನ ಹೊಂದಿರುವನು.

ಮಧ್ಯೇ ಭಾಗ್ಯಂ ಭವೇದ್ವರ್ಮೇ ಪಿತೃಪಕ್ಷ ಪರಾಯಣಃ :
ಧರ್ಮೇ ಪೂರ್ಣ ನಿಶಾನಾಥೇ ಕ್ಷೀಣೇ ಸರ್ವಂ ವಿನಾಶಯೇತ್ । (ಗರ್ಗ)

ನವಮದಲ್ಲಿ ಪೂರ್ಣಿಮಾ ಚಂದ್ರನಿದ್ದರೆ ಮಧ್ಯವಯಸ್ಸಿನಲ್ಲಿ ಭಾಗ್ಯೋದಯವಾಗುವುದು. ತನ್ನ ಪಿತೃ ಪಕ್ಷದವರಲ್ಲಿ ಅಭಿಮಾನ ತುಂಬುವನು. ಕ್ಷೀಣಚಂದ್ರ ಸರ್ವ ವಿನಾಶಗೊಳಿಸುವನು.

ಕಾಂತಾ ಭೋಗೀ ಶಶಾಂಕೇನ । (ಹೋರಾಪ್ರದೀಪಕಾರ)

ನವಮದ ಚಂದ್ರ ಬಹು ಸ್ತ್ರೀಪತಿಯಾಗುವನು.

ಜನಪ್ರಿಯಃ ಸಾತ್ಮಜ ಬಂಧು ಧೀರಃ ಸುಧರ್ಮಧೀರ್ಪೂರ್ಣವ್ಯಸುತತ್ರಿಕೋಣೇ । (ಜಯದೇವ)

ಐದು ಒಂಬತ್ತರಲ್ಲಿ ಚಂದ್ರನಿದ್ದರೆ ಜನತೆಗೆ ಮೆಚ್ಚಿನವ ಪುತ್ರಜನ ಬಂಧುಜನರಿಂದ ಕೂಡಿ ಧೈರ್ಯದಿಂದ ನೆಲಸಿರುವವ. ಉತ್ತಮ ಧರ್ಮ, ಬುದ್ಧಿ, ಸಂಪತ್ತುಗಳವ

ನವಮೇ ತೀರ್ಥಯಾತ್ರಾ ಚ ವಿಂಶದ್ವರ್ಷೇ ವಿನಿಶ್ಚಿತವ್ ॥ (ಹಿಲ್ಲಜಾತಕ)

ನವಮದ ಚಂದ್ರ ಇಪ್ಪತ್ತನೇ ವರ್ಷದಲ್ಲಿ ತೀರ್ಥಯಾತ್ರೆ ಗೊಳಿಸುವನು.

ಚಂದ್ರೇ ಚತುರ್ವಿಂಶತಿ: ಫಲಮಿದಂ ಲಾಭೋದಯೇ ಸಂಸ್ಮೃತಮ್ ॥

(ಬೃಹದ್ಯವನ ಜಾತಕ)

ನವಮದ ಚಂದ್ರನು ಇಪ್ಪತ್ತನಾಲ್ಕನೆ ಪ್ರಾಯದಲ್ಲಿ ಲಾಭೋದಯ ಗೊಳಿಸುವನು.

ನವಮದಲ್ಲಿ ಚಂದ್ರನಿದ್ದರೆ ತೇಜಸ್ವಿ ಧನಾಢ್ಯ ದೇವರಭಕ್ತ ಮತ್ತು ಪ್ರವಾಸಗೊಳ್ಳುವವ ಎಂದು ಯವನ ಮತ.

ಜಲಪ್ರವಾಸಿ, ಧರ್ಮ ಯಾ ಶಾಸ್ತ್ರದಲ್ಲಿ ಪ್ರೇಮಿ, ವಿಧ್ಯಾಭಿಮಾನಿ, ಅಧ್ಯಾತ್ಮ ಜ್ಞಾನಿ, ಯೋಗಿ, ಕಲ್ಪನಾ ಶಕ್ತಿಯುವ, ಸ್ಥಿರಚಿತ್ತ. ನವಮದ ಚಂದ್ರನವ ಆಪ್ತಜನ ಗೆಳೆಯರುಗಳಿಂದ ಯಾ ಹೆಂಡತಿಯ ಬಂಧುವರ್ಗೀಯರಿಂದ ಚೆನ್ನಾಗಿ ಸಹಾಯ ಹೊಂದುವನು. ಚಂದ್ರ ಶುಭ ಸಂಬಂಧಿತನಾಗಿ ಯಾ ಪೂರ್ಣ ಬಲಗೊಂಡವನಾಗಿರುವುದರಿಂದ ಈ ಫಲಗಳಾಗುವವು. ಕಾನೂನು, ಮುದ್ರಣಾಲಯ ಪಾಲುಗಾರಿಕೆ, ಶಾಸ್ತ್ರೀಯ ವಿಷಯ ಜ್ಞಾನ ಅಥವಾ ಜಲಪ್ರವಾಸದಿಂದ ಲಾಭೋದಯ ಭಾಗ್ಯೋದಯಗಳಾಗುವವೆಂದು ಪಾಶ್ಚಾತ್ಯ ಮತ

ಮೇಷ ಸಿಂಹ ಧನು ಈ ಪುರುಷ ರಾಶಿಗಳ ಚಂದ್ರ ನವಮಗತನಾದರೆ ಗರ್ಗ ಜಯದೇವರ ಮತ ಅಧಿಕ ಕಾಣುವುದು. ಮಿಥುನ ತುಲಾ ಕುಂಭ ಚಂದ್ರನಲ್ಲಿ ಇದಕ್ಕಿಂತ ಕಡಮೆ ಗೊಂಡಿರುವುದು. ಯವನ ಬೃಹದ್ಯವನ ಪಾಶ್ಚಾತ್ಯರ ಮತ ಪುರುಷ ರಾಶಿಯ ಚಂದ್ರನಲ್ಲಿ ಕಾಣುವುದು. ಪುರುಷ ರಾಶಿಯ ನವಮದ ಚಂದ್ರ ಅವನ ನಂತರ ಸಹೋದರನ ಜನನ ಇಲ್ಲವೆ ಹೆಚ್ಚು ಸಹೋದರರ ಜನನವನ್ನು ಕೊಡುವನು. ಹಿರಿಯ ಅಣ್ಣನಿಂದ ಸುಖ

ಲಾಭವಾಗುವುದಿಲ್ಲ. ಇದ್ದರೂ ಕುಟುಂಬಕ್ಕೆ ಅನುಕೂಲನಾಗಿರುವುದಿಲ್ಲ ಇವನ ನಂತರ ಸಹೋದರಿಯಾದರೂ ಉಳಿಯುವುದಿಲ್ಲ. ಸ್ತ್ರೀರಾಶಿಯ ಚಂದ್ರ ಇವನ ಜನನದ ಬಳಿಕ ಸಹೋದರಿಯನ್ನು ಕೊಡುವನು. ಸಹೋದರನ ಸುಖ ಕೊಡುವುದಿಲ್ಲ. ಹಿರಿಯ ಸಹೋದರಿ ಇದ್ದರೆ ಅವಳಿಂದ ಸುಖವಿರುವುದಿಲ್ಲ. ನವಮದ ಚಂದ್ರ ದೂಷಿತನಾಗಿದ್ದರೆ ನಲವತ್ತೈದು ಪ್ರಾಯಕ್ಕೆ ಬರುವಾಗ ವಿಳಂಬವಾಗಿ ಪುತ್ರ ಸಂತಾನವಾಗುವುದು. ಕೆಲವೊಮ್ಮೆ ಪುತ್ರ ಸಂತತಿ ಸುಖಕ್ಕೆ ತೊಡಕಾಗುವುದು. ಸಿಂಹದ ನವಮದ ಚಂದ್ರನಿಂದ ಭಾಗ್ಯವೃದ್ಧಿಯೊಂದಿಗೆ ಮರಣವಾಗುವುದು. ಧನೂರಾಶಿಯ ಚಂದ್ರ ವಂಶತನದ ಹೆಸರನ್ನು ಬೆಳಗಿಸುವನು. ನವಮದ ಮೇಷದ ಚಂದ್ರ ಕಷ್ಟತೊಡಕುಗಳನ್ನು ಹೊಂದಿ ಭಾಗ್ಯದಾಯಕನಾಗುವನು. ಸಾರ್ವಜನಿಕ ಕಾರ್ಯಗಳಲ್ಲಿ ಭಾಗವನ್ನೂ ವಹಿಸಿ ಜನರ ಪ್ರೀತಿ ಹೊಂದುವನು. ಸಾರ್ವಜನಿಕ ಕಾರ್ಯಗಳಲ್ಲಿ ಮುಂದರಿದು ಬಂದರೂ ಅಧಿಕಾರ ಸ್ಥಾನ ಹೊಂದುವುದಿಲ್ಲ. ಅಧಿಕಾರದಲ್ಲಿ ಆಸಕ್ತಿಯು ತುಂಬಿರುವುದಾದರೂ ಅಧಿಕಾರ ಹೊಂದುವರಲ್ಲ. ಕರ್ಕಾಟಕ, ವೃಶ್ಚಿಕ, ಮೀನ, ಮೇಷ ಸಿಂಹ ಧನು ಚಂದ್ರನವರು ಲೇಖಕರೂ, ಬೋಧಕರೂ, ಮುದ್ರಣ ಪ್ರಕಾಶಕರೂ ಆಗುವರು. ವೃಷಭ ಕನ್ಯಾ ಮಕರ ನವಮದ ಚಂದ್ರ ಶಿಕ್ಷಣವನ್ನು ಅರ್ಧದಲ್ಲಿ ಕೊನೆಗೊಳಿಸುವವ ಮಿಥುನ ತುಲಾ ಕುಂಭ ಚಂದ್ರ ತೊಡಕೂಗೂಡಿ ಶಿಕ್ಷಣ ಪೂರೈಸುವವ. ಈ ನವಮದ ಪುರುಷ ರಾಶಿಯ ಚಂದ್ರ ಮನಸ್ಸಿನ ಮೇಲೆ ಯಾವುದಾದರೂ ಒಂದು ವಿಷಯದಲ್ಲಿ ಪರಿಣಾಮ ಬೀರುವವನಾಗುವನು. ಈ ಪರಿಣಾಮದ ಕಾರ್ಯಗಳೂ ನಡೆಯುವವು.

## ದಶಮದ ಚಂದ್ರ

ನಿಷ್ಪತ್ತಿಂ ಸಮುಪೈತಿ ಧರ್ಮಧನಧೀಶೌರ್ಯೈರ್ಯುತಃ ಕರ್ಮಗೇ । (ವರಾಹ)

ದಶಮದಲ್ಲಿ ಚಂದ್ರನು ಇದ್ದರೆ ಧರ್ಮ, ಧನ, ಬುದ್ಧಿಶಕ್ತಿ, ಶೌರ್ಯಗಳಿಂದ ಕೂಡಿದವನಾಗಿ ಪರಿಣತಿಯನ್ನು ಹೊಂದುವನು.

ಲಕ್ಷ್ಮೀಸುಕೀರ್ತಿಃ ಕೃತಕಾರ್ಯಸಿದ್ಧಿ ಧರ್ಮೋಪಪನ್ನಾ ಶೌರ್ಯಾಭಿಮಾನಿ ಮೇಂದಾ ।

ಪತ್ತರಲ್ಲಿ ಚಂದ್ರನಿದ್ದರೆ ಭಾಗ್ಯಲಕ್ಷ್ಮಿ ಸುಕೀರ್ತಿ ಗಳಿಂದ ಕೂಡಿ ಸತ್ಕರ್ಮಕಾರ್ಯ ಸಿದ್ಧಿಗೊಳ್ಳುವಿಕೆಯಾದನೂ ರಾಜಮಿತ್ರತನ ಗೌರವಗೊಳ್ಳುವವನೂ ಆಗುವನು.

ಪೂರ್ವಾಪತ್ಯೇ ಪ್ರಥಮತಿ ಸುಖಂ ಸ್ವೈನ ಸಕಶವರ್ ॥ (ಜಯದೇವ ಕವಿ)

ಪ್ರಥಮ ಸಂತಾನದ ಸೌಖ್ಯ ಯಾವಾಗಲೂ ಹೊಂದಿ ಬರುವುದಿಲ್ಲ.

ಸ ಚಂದ್ರೇ ಚ ವ್ಯೈಶ್ಯವೃತ್ತಿಃ ಪ್ರಕಲ್ಪ್ಯಾ ॥ (ಜಾಗೇಶ್ವರ)

ದಶಮದಲ್ಲಿ ಚಂದ್ರನಿದ್ದರೆ ವ್ಯಾಪಾರ ವೃತ್ತಿಯಿಂದ ಧನ ಲಾಭವಾಗುವುದು.

ಚಂಚಲಾ ಲಕ್ಷ್ಮೀ । ಚಂದ್ರಸ್ತ್ರೀವೇದೇಧನಕೃತ್ (ಬೃಹದ್ಯವನ)

ಸಂಪತ್ತಿನ ಏರಿಳಿತಗಳಾಗುವವು. ನಲುವತ್ತನೂರನೆ ಪ್ರಾಯದಲ್ಲಿ ಧನಲಾಭ ಕೊಡುವನು.

ಪುರಾಜಾತಕೇ ಸೌಖ್ಯಜಾಲ್ಪಂಕರೋತಿ ॥ (ನಾರಾಯಣಭಟ್ಟ)

ದಶಮದ ಚಂದ್ರ ಮೊದಲು ಸೌಖ್ಯಕಡಮೆ ಕೊಡುವನು.

ನರ್ವೇ ರಾಪಾಧಿಕೇsಪಿಚ ॥ (ಹಿಲ್ಲಜಾತಕಕಾರ)

ದಶಮದ ಚಂದ್ರ ಇಪ್ಪತ್ತನಾಲ್ಕನೆ ಪ್ರಾಯದಲ್ಲಿ ಲಾಭ ಕೊಡುವನು.

ದಶಮದಲ್ಲಿ ಚಂದ್ರನಿದ್ದರೆ ಪಿತೃ ಭಕ್ತನು ಇಲ್ಲವೆ ಕುಟುಂಬ ಸೇವಕನಾಗಿರುವನು. ತಂದೆಯಲ್ಲಿ ಭಕ್ತಿ ಅಧಿಕ. ಶಾಂತಪ್ರವೃತ್ತಿ. ಸಂತೋಷದಿಂದಿರುವವ ಧನಿಕ ವಿದ್ವಾಂಸ ಚತುರ ಎಂದು ಯವನ ಮತ.

ಪಾಶ್ಚಾತ್ಯರು ದಶಮದ ಚಂದ್ರನು ಗೆಲವು, ಸಂಪತ್ತುಗಳನ್ನು ಕೊಡುವನೂ ದೊಡ್ಡ ನೆಲೆಯ ಹೆಂಗಸಿನ ಮೂಲಕ ಲಾಭವಾಗುವುದು. ಜನೋಪಯೋಗಿಗಳಿಂದ ವಸ್ತುಗಳ ವ್ಯಾಪಾರದಿಂದ ಲಾಭವಾಗುವುದು. ಜನಮಾನ್ಯನಾಗುವನು. ನೀಚರಾಶಿಯ ಚಂದ್ರನಾದರೆ ಅಪಮಾನ ಅಪಕೀರ್ತಿಗಳಾಗುವವು ಸ್ಥಿರರಾಶಿಯ ಚಂದ್ರನಾದರೆ ಸ್ಥಿರಚಿತ್ತನಾಗುವನು. ದ್ವಿಸ್ವಭಾವ ರಾಶಿಯ ಚಂದ್ರನಾದರೆ ಅಲ್ಪ ಭಾಗ್ಯನಾಗುವನು. ಚರರಾಶಿಯ ಚಂದ್ರ ವ್ಯಾಪಾರದಲ್ಲಿ ಅಸ್ಥಿರತೆಯನ್ನು ಮಾಡುವನು. ಕುಜಯುಕ್ತನಾಗಿದ್ದರೆ ಉದ್ಯೋಗದಲ್ಲಿ ಮುಗ್ಗಟ್ಟು ಎಂಬ ಫಲದವ ಎಂದಿರುವರು.

ಪುರುಷ ರಾಶಿಯ ಚಂದ್ರ ದಶಮದಲ್ಲಿದ್ದರೆ ವ್ಯಾಪಾರ ವೃತ್ತಿ ಹಿಡಿಯುವುದು. ನೈಸರ್ಗಿಕ ವರ್ಷ ಹಿಲ್ಲಜಾತಕಕಾರನದು. ಸ್ತ್ರೀ ರಾಶಿಯ ಚಂದ್ರನಾದರೆ ಅನುಭವಕ್ಕೆ ಬರುವುದು. ನಲುವತ್ತನಾರು ಎಂಬ ಫಲ ಇನ್ನೊಂದು ವರ್ಷ ಪ್ರಮಾಣ. ಇದು ಅನುಭವದ ದೃಷ್ಟಿಯಲ್ಲಿ ಹೊಂದಿಲ್ಲ. ಪುರುಷ ರಾಶಿಯ ಚಂದ್ರನಲ್ಲಿ ಯವನ ಮತ ಅನುಭವಾತ್ಮಕವಾಗುವುದು. ವೃಶ್ಚಿಕ ರಾಶಿಯ ನೀಚದ ಚಂದ್ರ ಡಾಕ್ಟರರ ವೃತ್ತಿಯಿಂದ ಬೆಳೆಯುವರು. ಅನ್ಯವೃತ್ತಿಯಲ್ಲಿ ತ್ರಾಸ ಹೊಂದುತ್ತಿರುವರು. ಪಾಶ್ಚಾತ್ಯ ಮತದಲ್ಲಿ ಚರ ರಾಶಿಯ ಚಂದ್ರ ಅಸ್ಥಿರ ವೃತ್ತಿಯೆಂಬ ಫಲ ಸರಿಯಾಗಿದೆ. ಅನ್ಯಫಲಗಳು ಪುರುಷ ರಾಶಿಗೆ ಸೇರುತ್ತದೆ. ಮೇಷ, ತುಲಾ, ಕರ್ಕಟಕ ಮಕರ ರಾಶಿಗಳ ದಶಮದ ಚಂದ್ರ ಬಾಲ್ಯದಲ್ಲಿ ಮಾತೃ ಯಾ ಪಿತೃವಿಯೋಗ ಗೋಳಿಸುವನು ದಶಮದ ಚಂದ್ರನವರು ಗ್ರಾಮಪಂಚಾಯತಿ ನಗರದ ನಾಗರಿಕಸಭೆ (ಮುನ್ಸಿಪಾಲಿಟಿ) ಗಳಲ್ಲಿ ಭಾಗಗೊಳ್ಳುವರು. ಗ್ರಾಮದ ನೆಲೆಯಿಂದ ಮುಂದಾಳು ತನಗೊಳ್ಳುವರು. ಸಪ್ತಮ ಭಾವಫಲದಲ್ಲಿ ಕೊಡಲಾದ ಉದ್ಯೋಗ ವ್ಯವಸಾಯ ಚಿಂತನೀಯ. ವೃಷಭ ಕನ್ಯಾ ವೃಶ್ಚಿಕ ರಾಶಿಗಳ ಚಂದ್ರನಾದರೆ ಹಿರಿಯರ ಸಾಲವನ್ನು ತೀರಿಸುವ ಸಂಪರ್ಕವಾಗುವುದು. ಇಪ್ಪತ್ತೆಂಟನೆ ಪ್ರಾಯದಿಂದ ಸ್ಥಿರ ಸ್ಥಾವರ ಸಂಪತ್ತಾಗುವುದು. ಮೇಷ ಕರ್ಕಟಕ ಮಕರದ ಚಂದ್ರ ಜೀವನದಲ್ಲಿ ಸ್ಥಿರತೆ ಕೊಡುವುದಿಲ್ಲ. ಅನೇಕ ವೃತ್ತಿಗೊಂಡು ಕೆಳಕ್ಕಿಳಿಯುವರು. ಆಗಾಗ ನೌಕರಿ ಭಿನ್ನತೆಗೊಳ್ಳುವರು. ಆಹಾರ ವಸ್ತುವಿನ ವ್ಯವಹಾರ ಚೆನ್ನಾಗಿರುವುದಿಲ್ಲ. ವೃಶ್ಚಿಕದ ದಶಮದ ಚಂದ್ರ ಹೆತ್ತವರ ಸುಖಕ್ಕೆ ಕೆಡುಕಿನವನಲ್ಲ. ಅನ್ಯರಾಶಿಗಳ ಚಂದ್ರ ಹೆತ್ತವರಲ್ಲೊಬ್ಬರ ಸುಖಕ್ಕೆ ಅನಿಷ್ಟನಾಗಿ ಎರಡನೆ ಉಳಿದ ವ್ಯಕ್ತಿಯಿಂದ ಸುಖ ಶಾಂತಿ ಗೊಳಿಸುವುದಿಲ್ಲ. ಈ ಚಂದ್ರನಲ್ಲಿ ಪುರುಷ ರಾಶಿಯ ಚಂದ್ರ ಅಧಿಕ ಶುಭ ಫಲದನ. ಪ್ರಥಮ ಸಂತಾನದಿಂದ ದುಃಖ ಎಂಬ ಜೀವನಾಥನ ಫಲ ಸ್ವೀಕಾರ್ಯವಾಗಿಲ್ಲ. ವ್ಯಯಾಧಿಪತ್ಯದ ಚಂದ್ರ ದಶಮಗತನಾದರೆ ಪುತ್ರ ಸಂತಾನಕ್ಕೆ ಅನಿಷ್ಟ.

**ಲಾಭಭಾವದ ಫಲ**

"ಖ್ಯಾತೋ ಭಾವಗುಣಾನ್ವಿತೋ ಭವಗತೇ" (ವರಾಹ)

ಲಾಭದಲ್ಲಿ ಚಂದ್ರನು ಇದ್ದರೆ ಪ್ರಸಿದ್ಧನೂ ಭಾವಗುಣದಿಂದ ಕೂಡಿದವನೂ ಆಗುವನು.

ಧನೇಶ್ವಾನಯುಕ್ತೋ ಧನ್ಯೋವಾಹನೈರ್ವಾತಥಾ ವಸ್ತ್ರಭೂಷಾದಿಸೌಖ್ಯಪ್ರಜಾಸ್ಯಾತ್ ।
ತಸ್ಯಕೀರ್ತಿರ್ಧನವೇದ್ಯೋರೋಗಯೋಗೋ ಯದಾ ಚಂದ್ರಮಾ ಲಾಭಭಾವಂಗತಃ ॥

(ಜಾಗೇಶ್ವರ)

ಲಾಭದಲ್ಲಿ ಚಂದ್ರನು ಇದ್ದರೆ ಧನ ವಾಹನ ವಸ್ತ್ರ, ಭೂಷಣಗಳಿಂದಲೂ ಕನ್ಯಾಸಂತಾನಾಧಿಕ್ಯದಿಂದಲೂ ದೃಢವಾದ ಕೀರ್ತಿಯಿಂದಲೂ ಯಾವುದಾದರೂ ರೋಗದಿಂದಲೂ ಕೂಡಿರುವನು.

ಲಾಭೇ ಚಂದ್ರೇ ಬುದ್ಧಿವಿಕಾಸೇನಯುಕ್ತಃ ।
ಧನೀಸನ್ಮಾರ್ಗಗಾಮಿನಿಷ್ಠಃ ಪುತ್ರಾಢ್ಯೋ ಭಾಗ್ಯಯುತಃ ॥

ಬುದ್ಧಿ ವಿಕಾಸಗುಣ, ಧನ, ಸನ್ಮಾರ್ಗನಿಷ್ಠೆ, ಲಕ್ಷ್ಮೀ ಪುತ್ರಾದಿ ಭಾಗ್ಯಯುತನೂ ಆಗುವನು.

ವಿಖ್ಯಾತೋ ಗುಣವಾನ್ ಪ್ರಾಜ್ಞೋ ಭೋಗಲಕ್ಷ್ಮೀ ಸಮನ್ವಿತಃ ।
ಲಾಭಸ್ಥಾನಗತೇ ಚಂದ್ರೇ ಗೌರೋ ಮಾನವವತ್ಸಲಃ ॥ (ಗರ್ಗ)

ಲಾಭದಲ್ಲಿ ಚಂದ್ರನು ಇದ್ದರೆ ವಿಖ್ಯಾತ, ಗುಣವಂತ, ಪ್ರಾಜ್ಞ, ಭೋಗ ಸಂಪತ್ತು, ಬಿಳುಪುವರ್ಣ, ಮಾನವವತ್ಸಲತೆಗಳುಳ್ಳವನು ಆಗುವನು.

ಮಿತ್ರಾರ್ಥಯುಕ್ತಃ ಕೀರ್ತಿಗುಣೈರುಪೇತೋ ಭೋಗೀ ಸುಯಾನೋ ಭವಭಾವಗೇಂದೌ ॥

(ಜಯದೇವ)

ಲಾಭದಲ್ಲಿ ಚಂದ್ರನಿದ್ದರೆ ಮಿತ್ರ, ಧನ, ಕೀರ್ತಿ ಸದ್ಗುಣಗಳಿಂದಲೂ ಉತ್ತಮ ವಾಹನ ಸುಖ ಭೋಗಗಳಿಂದಲೂ ಕೂಡಿರುವನು.

ಪ್ರತಿಷ್ಠಾಧಿಕಾರಾಂಬರಾಣಿ (ಚಮತ್ಕಾರ ಚಿಂತಾಮಣಿ)

ಜನತೆಯಲ್ಲಿ ಪ್ರತಿಷ್ಠೆಯ ಅಧಿಕಾರ ವಸ್ತ್ರಗೊಂಡಿರುವನು.

ಏಕಾದಶೇ ಸಪ್ತವಿಂಶೇ ರಾಜಮಾನ್ಯಂ ಚತುಷ್ಪದೇ ॥ (ಹಿಲ್ಲಜಾತಕ)

ಹನ್ನೊಂದು ಇಪ್ಪತ್ತೇಳು ಪ್ರಾಯದಲ್ಲಿ ರಾಜ ಗೌರವ ಜಾನುವಾರುಗಳ ಲಾಭ ಪ್ರಾಪ್ತಿಯಾಗುವುದು.

ಲಾಭದಲ್ಲಿ ಚಂದ್ರನಿದ್ದರೆ ಧನಿಕನೂ ರೂಪವಂತನೂ ಉದಾರಚಿತ್ತನೂ ನಿರ್ದೋಷಿಯೂ ಮಧುರ ಭಾಷಿಯೂ ಆಗುವನು ಎಂದು ಯವನ ಮತ.

ಪಾಶ್ಚಾತ್ಯರು ತುಂಬ ಗೆಳೆಯರನ್ನು ಹೊಂದುವನು. ಜನಪ್ರಿಯನಾಗಿರುವನು. ಸಂಸಾರಿಕ ಸುಖ ಚೆನ್ನಾಗಿರುವುದು. ಸಾರ್ವಜನಿಕ ಸಂಸ್ಥೆಯ ಮುಂದಾಳಾಗುವನು. ಎಂದು ಹೇಳಿರುವರು.

ಎಲ್ಲ ಗ್ರಂಥಕಾರರು ಲಾಭದ ಚಂದ್ರನಿಗೆ ಶುಭಫಲವನ್ನೇ ಕೊಟ್ಟಿರುವರು. ಈ ಶುಭಫಲಗಳೆಲ್ಲವೂ ಪುರುಷ ರಾಶಿಯಲ್ಲಿ ಅಧಿಕವಾಗಿರುವವು. ರೋಗ ಫಲ ಸ್ತ್ರೀರಾಶಿಯ ಚಂದ್ರನಲ್ಲಿ ಕಾಣಲವಕಾಶವಾಗುತ್ತದೆ. ನೈಷ್ಠಿಕೀಯ ವ್ಯಕ್ತಿಯವರೂ ಕಾಣುವರು. ಅದರಿಂದ ಯಶಸ್ಸುಗಳಿಗೆ ದಾಳನ್ನು ಸಾಧಿಸುವವರೂ ಕಾಣುವರು. ಸ್ವತಂತ್ರತೆಯ ಕಡೆಗೆ ಗಮನಗೊಂಡಿರುವರು. ಸ್ವಸುಖ ಸಿರಬಿಲಾಷೆ ಜನಹಿತಕ್ಕಾಗಿ ಹೋದಗೊಂಡು ರಕ್ಷಣಾ ಕರ್ಮಗೂಳ್ಳುವ ಮಹಾಪುರುಷರೂ ಕಾಣಬರುವರು.

ಶ್ರೀ. ಜಯಾಭ್ಯುದಯ ಶಾಲಿವಾಹನ ಶಕ-ವರುಷ 1791 ಪ್ರವಾದಿ ಸಂವತ್ಸರದ ಕನ್ಯಾಮಾಸದಿನ 16 ಭಾದ್ರಪದ ಬಹುಳ 12 ಶನಿವಾರ ದಿವಾ 3 ಘಟಿ 12ವಿಘಟಿಗೆ ತುಲಾದಿದ್ರೇಕ್ಕಾಣ ಲಗ್ನದಲ್ಲಿ ಭಾರತದ ಯುಗ ಪುರುಷ ಜಗದ್ವಂದಿತ ಬಾಪೂಜನನ. ಗರ್ಭಶಿಷ್ಟ ಕೇತುಮಹಾದಶಾ ವರುಷ 4 ಮಾಸ 10ದಿನ 23 ಘಟಿ 12 ಗ್ರಹಸ್ಫುಟ ಲಗ್ನಸ್ಫುಟ 6-7-1, ರವಿಸ್ಫುಟ 5-15 20, ಚಂದ್ರ 4-4-2, ಕುಜ 7-7-0, ಬುಧ 6-6-16, ಗುರು 1-1-2, ಶುಕ್ರ 6-6-29, ಶನಿ 7-7-24, ರಾಹು 3-3-16, ಕೇತು 9-3-16 ಈ ಕೆಳಗೆ ಗ್ರಹಕುಂಡಲಿಯಲ್ಲಿ ಚಂದ್ರನ ತ್ಯಾಗ ಗುಣ ಧರ್ಮದೊಂದಿಗೆ ಸತ್ವರಜತಮ ಕಾರಕ ಗ್ರಹರಿಂದಲೂ ಪ್ರತಿಯೋಗ ತ್ರಿರೇಕಾದಶ, ದ್ವಿದ್ವಾದಶಕ, ತ್ರಿಕೋಣ ಕೇಂದ್ರಯುತಿ ಸಂಪರ್ಕ ವಿಚಾರಗೊಂಡು ವಿವೇಚಿಸುವುದರಿಂದ ಅನ್ಯನು ನೋಗುಣಧರ್ಮಗಳನ್ನು ಹೊಂದಬಹುದಾಗಿದೆ. ಅನ್ಯಯುಗ ಪುರುಷರು ಅದೃಷ್ಟ ಸಂಪರ್ಕ ಸತ್ಕದ ಪರಿಪಾಲನಾದಿಗಳಿಗಾಗಿ ಹೊಂದಿದುದು ಕಷ್ಟ. ಈ ಯುಗ ಪುರುಷರ ದೇಶದ ಮತ್ತು ಮಾನವೀಯ ಜನಾಂಗದ ಹಿತಸಾಧನೆಗಾಗಿ ತಾನೇ ತಂದು ಕೊಂಡ ಕಷ್ಟ. ಇದಕ್ಕೆ ಕಾರಣ ದ್ವಿದ್ವಾದಶದ ಪಾಪರು

ಕನ್ಯಾಧಿಪ ಚಂದ್ರ ರಾಜ್ಯಕಾರಕ ಪುರುಷ ಕ್ಷೇತ್ರದಲ್ಲಿ ಲಗ್ನಾಧಿಪನಿಂದ ಬಾಧಕ ದಲ್ಲಿ. ಈ ಚಂದ್ರ ಉಚ್ಚಾಂಶದವನಾಗಿಯೂ ರವಿ ಹೋರಾಗತ. ರವಿ ಯುಗ್ಮರಾಶಿಯಲ್ಲಿ ಚಂದ್ರ ಹೋರಾಗತ ಈ ಎರಡು ರಾಜಕಾರಕರು ಹೊಂದಿರುವ ಹೋರಾಫಲ ಆತ್ಮಾನುಕೂಲಕಾರಕರಿಗೂ ಅನ್ಯಗ್ರಹರಿಗೂ ಉಕ್ತವಾದ ರವಿ ಹೋರೆಯಿಂದ "ಖ್ಯಾತೋ ಮಹೋದ್ಯಮಃ ಬಲಾರ್ಥ ಯುತೋ ತೇಜಸ್ವೀ" ಎಂಬ ಫಲವೂ ಸೂರ್ಯ ಹೋರೆಯಿಂದ ಇದೇ ಫಲದೊಂದಿಗೆ ಜ್ಞಾನಕಾರಕನಾದ ಈ ಗುರು ರವಿಗೆ ನೋಡುತ್ತಿದ್ದು ಅವನ ಹೋರಾಫಲ.

ಮಾರ್ದವ ಕಾಂತಿ ಸೌಖ್ಯ ಸೌಭಾಗ್ಯಾಧೀ ಮಧುರ ವಾಕ್ಯ ಯುತಃ ಪ್ರಜಾಃ

ಎಂಬ ಫಲಗಳೂ ಏಕಾದಶದ ಚಂದ್ರನಿದ್ದು ಪುರುಷರಾಶಿಯ ಚಂದ್ರನ ತ್ಯಾಗ ಫಲ ವಿಶೇಷತೆಯೊಂದಿಗೆ ಅನ್ಯವಿಚಾರಗಳ ಅವಗಾಹನೆಗಾಗಿ ಸಾಂಕಕ ಗ್ರಹ ಕುಂಡಲಿಯನ್ನು ಕೊಡಲಾಗಿದೆ.

| | | | |
|---|---|---|---|
| | | ಗುರು 10 | |
| ಕೇತು 10 | ಸಾಂಕಕ ಗ್ರಹಚಕ್ರ | | ರಾಹು 4 |
| | | | ಚಂದ್ರ 2 |
| | ಶನಿ 6<br>ಕುಜ 6 | ಲಗ್ನ 9<br>ಶುಕ್ರ 8<br>ಬುಧ 8 | ರವಿ 2 |

ಸತ್ಯ ಅಹಿಂಸಾರಾಧಕ ಸತ್ಯ ಅಹಿಂಸಾ ಬಲವಿಜಯಾಶ್ರಯ ಸರ್ವ ಧರ್ಮಸಮಾನತ್ವ ಮಾನವ ಕುಲ ಸುಧೇಷ್ಟ ತ್ಯಾಗಿಯ ಗ್ರಹಗಳನ್ನೂ ಪರಿಶೀಲನಕ್ಕಾಗಿ ಈ ಮಾತನ್ನೂ ಇಲ್ಲಿ ಮಂಡಿಸಲಾಗಿದೆ. ಏಕಾದಶದ ಚಂದ್ರನಿದ್ದಲ್ಲಿ ಸಹೋದರ ಸಹೋದರಿಯರು ಯಾ ಮಕ್ಕಳು ಇವರುಗಳಲ್ಲಿ ನಿರುಪಯೋಗಿ, ತ್ರಾಸದಾಯಕ, ದುರಾಚಾರ, ಅಥವಾ ಅಂಗವೈಕಲ್ಯ ದೋಷ

ಯುಕ್ತರಾಗಿ ಒಬ್ಬರನ್ನು ಕಾಣಬರಲವಕಾಶವಾಗುತ್ತಿದೆ. ಈ ಚಂದ್ರ ಲಾಭ ಸ್ಥಾನವವ ಪಂಚಮಕ್ಕೆ ನೋಡುವುದರಿಂದ ಮತ್ತು ಅವಸಿರುವ ಭಾವಫಲದಲ್ಲಿ ಬಾಹ್ಯಭಾವಕ್ಕೆ ಅನಿಷ್ಟ ಫಲವು ಕಾಣಬರುವುದಾಗಿದೆ.

## ವ್ಯಯದ ಚಂದ್ರ

ಕ್ಷುದ್ರೋಽಂಗಹೀನೋವ್ಯಯೇ ॥ (ವರಾಹ)

ವ್ಯಯದ ಚಂದ್ರನಿದ್ದರೆ ನಿಕೃಷ್ಟನೂ ಕಣ್ಣು ಮೊದಲಾದ ದೇಹಾಂಗ ಹೀನನೂ ಆಗುವನು.

ದ್ವೇಷ್ಯಃ ಪತಿತಃ ನಯನರುಗಾರ್ತೋಽಲಸೋ ಭವೇದ್ವಿಕಲಃ ।
ಚಂದ್ರೇ ತಥಾನ್ಯಜಾತೋ ದ್ವಾದಶಗೇ ನಿತ್ಯಪರಿಭೂತಃ ॥

(ಸಾರಾವ ೪೧)

ಜನರ ದ್ವೇಷಗೊಳ್ಳುವವನೂ, ಪತಿತ (ನೀಚವೃತ್ತಿ)ನೂ, ನಿಕೃಷ್ಟನೂ ಕಣ್ಣಿನರೋಗ ಪೀಡಿತನೂ ಆಲಸಿಯೂ ಅಂಗವಿಕಲನೂ, ಅನ್ಯಜಾತಿ ಪುರುಷ ಜಾತನೂ, ಜನತೆಯಿಂದ ಯಾವಾಗಲೂ ಪರಾಭವ ಹೊಂದುವವನೂ ದ್ವಾದಶದ ಚಂದ್ರನವನಾಗುವನು.

ವಿಯೋಗೀ ಸದಾಚಾರುಶೀಲೋ ನಮಿತ್ರೈರ್ಭವೇದ್ವ್ಯೈಕಲೋ ನೇತ್ರರೋಗೀ ಕೃಶಾಂಗಃ ॥
ಸ್ವಯಂಕ್ಷೀಣವೀರ್ಯಃ ಸದಾಕ್ಷೀಣ ಚಂದ್ರೇ ಭವೇದ್ರಿಷ್ಫಗೇ ಪೂರ್ಣತಾ ಚೇತ್ಸುಶೀಲಃ ॥

(ಚಾಗೇಶ್ವರ)

ದ್ವಾದಶದ ಚಂದ್ರ ಕ್ಷೀಣ ಚಂದ್ರನಾಗಿದ್ದರೆ ದಾಂಪತ್ಯ ವಿಯೋಗ ಹೊಂದುವನು. ಯಾವಾಗಲೂ ಒಳ್ಳೆಯ ನಡತೆ ಇರದವನಾಗುವನು. ಯಾರೊಡನೆಯೂ ಮಿತ್ರತನ ಹೊಂದದವನೂ. ಅಂಗವಿಕಲತೆ ನೇತ್ರರೋಗದವನೂ ಅಶಕ್ತನೂ ಕ್ಷೀಣ ಶರೀರನೂ ಆಗುವನು. ಪೂರ್ಣ ಚಂದ್ರನಾದರೆ ಒಳ್ಳೆಯ ನಡತೆಯವನಾಗಿರುವನು.

ಸದಾಸದ್ವ್ಯಯೋ ಮಂಗಲೇನ ಪಿತೃವ್ಯಾದಿವರ್ಗಾತ್ಪ್ರಾರ್ಕೆಽಂತರ್ವಿಷಾದೀ ನ ಚಾಪ್ನೋತಿ
ಕಾಮಂ ಪ್ರಿಯಾಲ್ಪಂ ಪ್ರಿಯಶ್ಚಂ । (ಚಮತ್ಕಾರ ಚಿಂತಾಮಣಿ)

ಯಾವಾಗಲೂ ಒಳ್ಳೆಯವಕ್ಕಾಗಿರುವ ವ್ಯಯ ತನ್ನ ಹೆತ್ತವರು ಬಂಧು ವರ್ಗೀಯರುಗಳಿಂದ ಮನೋದುಃಖ ಹೊಂದುವವನೂ ವಿಷಯ ಸುಖ

ಕಡಮೆ ಹೊಂದುವವನೂ ಸ್ವಜನ ಪ್ರೀತಿ ಕಡಮೆ ಹೊಂದುವವನೂ ಆಗುವನು.

ವ್ಯಯೇಶಶಿನಿ ಕಾರ್ಪಣ್ಯಮವಿಶ್ವಾಸಃ ಪದೇಪದೇ । (ಗರ್ಗ)

ವ್ಯಯದ ಚಂದ್ರನಿದ್ದರೆ ಕೃಪಣತೆ ಹೆಚ್ಚು ಹೆಚ್ಚಿಗೂ ಅವಿಶ್ವಾಸ ಹೊಂದುವನು.

ಕಾಣಂಶಶೀ (ಬಾದರಾಯಣ)

ಕುರುಡನಾಗುವನು.

ಚಂದ್ರೇ ವಿದೇಶವಾಸೀ (ವೈದ್ಯನಾಥ)

ವಿದೇಶದಲ್ಲಿ ವಾಸಗೊಳಿಸುವನು.

. ಹಿಂಸ್ರೋಽಂಗಹೀನಃ ಸರಿಪುಃ ಸುಹೃತ್ಸು ವೈಷಮ್ಯಕೃತ್ ಸ್ವಲ್ಪದೃಗಿಂದುರಿಃಫೇ ।
(ಜಯದೇವ)

ಹಿಂಸೆಗೊಳಿಸುವವ ಅಂಗಹೀನ ಶತ್ರುಗಳಿಂದ ಕೂಡಿದವ, ಗೆಳೆಯರಲ್ಲಿ ವಿಷಮತೆಗೊಳಿಸುವವನೂ ಸ್ವಲ್ಪ ದೃಷ್ಟಿಯುವನೂ ಆಗುವನು.

ದ್ರವ್ಯಕ್ಷಯಂ ಕ್ಷುಧಿತಾಲ್ಪತ್ವಂ ನೇತ್ರರುಕ್ಕಲಹಂ ಗೃಹೇ ॥ (ಜ್ಯೋತಿಷಕಲ್ಪತರು)

ದ್ವಾದಶದ ಚಂದ್ರು ಸಂಪತ್ತಿನ ಕ್ಷಯ ಅಲ್ಪ ಹಸಿವೆ ನೇತ್ರರೋಗ ಕಲಹಗಳನ್ನುಂಟು ಮಾಡುವನು.

ದ್ವಾದಶೇ ಹಾನಿ ಪೀಡಾ ಚ ತೃತೀಯೇ ವತ್ಸರೇ ಧ್ರುವಮ್ ॥ (ಹಿಲ್ಲಜಾತಕ)

ಹನ್ನೆರಡರ ಚಂದ್ರು ಮೂರನೆ ಪ್ರಾಯದಲ್ಲಿ ಹಾನಿ ಪೀಡೆಗಳನ್ನು ಕೊಡುವನು ನಿಶ್ಚಿತ.

ಚಂದ್ರೋಜಲಪೀಡನಂ ಪಂಚವೇದೇ ॥ (ಬೃಹದ್ಯವನ ಜಾತಕ)

ನಲುವತ್ತೈದನೆ ಪ್ರಾಯದಲ್ಲಿ ಜಲೋಪದ್ರುವ ಪೀಡೆ ಕೊಡುವನು.

ಕಣ್ಣಿನ ವಿಕೃತಿ ವಿರೋಧ ಬಹುವ್ಯಯ ಗೊಳ್ಳುವಿಕೆ ದುಷ್ಟ ಸ್ವಭಾವ ಕೀರ್ತಿ ವಿರಹಿತನಾಗುವಿಕೆಯು ಫಲ ಯವನ ಜಾತಕಕಾರನದು.

ಪಾಶ್ಚಾತ್ಯರು ವೃಶ್ಚಿಕ ಮಕರಗಳ ಚಂದ್ರ ವ್ಯಯದವ ವಂಚನೆ ಕಳ್ಳತನ ಗೊಳಿಸುವನು. ಅನ್ಯರಾಶಿಗಳಲ್ಲಿರುವ ಚಂದ್ರು ವಿಜಯ ಸುಖಸಂಪತ್ತು

ಗಳನ್ನು ಕೊಡುವನು. ಶುಭ ಸಂಬಂಧಿತನಾಗಿದ್ದರೆ ಪ್ರವಾಸದ ಮೂಲಕ ಲಾಭವಾಗುವುದು. ಔಷಧ ಸಂಸ್ಥೆ ಬಂದೀಖಾನೆಗಳ ಉದ್ಯನು ಸಂಪರ್ಕ ವಾಗುವುದು. ಮೇಷದ ಚಂದ್ರನಾದರೆ ಚಂಚಲಪ್ರವೃತ್ತಿ, ತಿರುಗಾಟದವ ಚೆಲು ಆಕೃತಿ ತಿಳಿವಿನ ಶಕ್ತಿಯುವನು. ಮಕರವೃಶ್ಚಿಕಗಳ ಚಂದ್ರನಾದರೆ ಧನ ಹೀನ ನಾಗುವನು. ಅನ್ಯರಾಶಿಗಳ ಚಂದ್ರನಾದರೆ ಧನಿಕನಾಗುವನು. ವಿದ್ವಾಂಸ ನಾಗಿರುವನು ದ್ವಾದಶದ ಚಂದ್ರ ಬಲಪೂರ್ಣನಾಗಿದ್ದರೆ ಭೂಮಿ ಕೃಷಿ ಸಂಪ ತ್ತುಗಳಿಂದ ಲಾಭವಾಗುವುದು. ಜೀವನದ ಅಂತ್ಯದ ವರೆಗೂ ಸುಖ ಹೊಂ ದಿರುವನು. ಕರ್ಕಟಕ ಮೀನ ರಾಶಿಗಳ ಚಂದ್ರ ಅನೇಕ ಪುತ್ರಸಂತಾನ, ಪುತ್ರಪ್ರೇಮಿ, ಸಟ್ಟಿಗಾರ, ಸ್ತ್ರೀಸುಖಭೋಗಿ, ರಾಜಯೋಗಿ, ಜ್ಞಾನಿ ಮಾಂತ್ರಿಕ ಅಥವಾ ಶಾಸ್ತ್ರಜ್ಞ ಎಂದು ತಿಳಿಸಿರುವರು.

ಎಲ್ಲ ಗ್ರಂಥಕಾರರು ದ್ವಾದಶದ ಚಂದ್ರನಿಗೆ ಅಶುಭ ಫಲವನ್ನು ಉಪ ದೇಶಿಸಿರುವರು. ಈ ಫಲಗಳು ಸ್ತ್ರೀರಾಶಿಯುಳ್ಳಿರುವ ಚಂದ್ರನಿಂದ ಕಾಣ ಲವಕಾಶವಿದೆ. ಶುಭಫಲಗಳು ಓಜರಾಶಿಯ ಚಂದ್ರನಿಂದುಂಟಾಗುವವು. ವೃಶ್ಚಿಕ ರಾಶಿಯ ಚಂದ್ರನಿಗೆ ಪಾಶ್ಚಾತ್ಯರು ಹೇಳಿದ ಫಲಗಳು ಸರಿ ಹೊಂದ ದವು. ವ್ಯಯದ ಚಂದ್ರ ಚೆಲುವಿನ ಸಾಮಾನ್ಯ ಬಿಳಿ ಬಣ್ಣದ ಆಕರ್ಷಕತೆಯು ದೇಹ ಹೆಂಡತಿಗೆ ಕೊಡುವನು. ಗುಣ ನಡತೆಗಳು ಚೆನ್ನಾಗಿರುವವು. ದಾಂ ಪತ್ಯ ಪ್ರೇಮ ಉತ್ತಮವಾಗಿರುವವು. ತುಂಬ ಧನವ್ಯಯವೂ ಇರುವುದು. ವೃಷಭ ಚಂದ್ರನಿದ್ದಲ್ಲಿ ಕುಟುಂಬ ನಷ್ಟಾಂಕ ಹೊಂದಿ ಧನಲಾಭ ಗೃಹಭೂಸಂಪ ತ್ತುಗಳಾಗುವವು. ದಾಂಪತ್ಯ ಸುಖಕರನಾಗಿರುವುದಿಲ್ಲ. ದ್ವಿತೀಯ ವಿವಾಹ ಕ್ಕೂ ಅವಕಾಶವಾಗುವುದು. ಯಾವುದಾದರೂ ಸಂಪರ್ಕದಿಂದ ಸಂಸಾರಿಕ ಜೀವನ ಸರಿಗೊಂಡಿರುವುದಿಲ್ಲ. ಮಕ್ಕಳಾಗದಿರುವಿಕೆ ವೈಧವ್ಯ ದುಃಖ ಬಡ ತನಗಳೂ ಕಾಣುವವು. ಸ್ತ್ರೀರಾಶಿಯ ಚಂದ್ರ ಋಣವನ್ನು ಮರಣ ಕಾಲ ದಲ್ಲಿರಿಸುವನು. ಆರರ ಚಂದ್ರನೂ ಇಂತೆಯೇ ಮಾಡುವನು. ಇಂತಹ ರಲ್ಲಿ ಚೋರಕಲಾಜ್ಞಾನವಿರುತ್ತದೆ. ಇದರಿಂದ ಗೂಢಚಾರರ ಕೆಲಸ ಈ ಚಂದ್ರನಿಗೊಪ್ಪುವುದು. ಷಷ್ಠದ ಚಂದ್ರನವರು ಉತ್ತಮ ನೌಕರಿಗೊಳ್ಳು ವರು. ಕನ್ಯೆಯ ಚಂದ್ರ ಹಿರಿಯ ಸಾಲ ಹೋಗೊಳಿಸಲು ಹೊಂದುವವ.

ಮಕರದ ಚಂದ್ರ ಲೋಭಿಯಾಗಿಸಿ ಸಂಪತ್ತನ್ನು ಕೂಡಿಸುವವ. ಕರ್ಕಾಟಕ ವೃಶ್ಚಿಕ ಮೀನಗಳ ಚಂದ್ರ ಮೀನಾಮೇಷನ ಪಡೆಯಲು ಬಿಡುವುದಿಲ್ಲ. ಮಿಥುನ ತುಲಾ ಕುಂಭ ಚಂದ್ರನವರು ವ್ಯವಸ್ಥಿತರಾಗಿ ಮಾತುಗೋಳ್ಳುವರು ಸಂಪತ್ತಿನ ವ್ಯವಹಾರದಲ್ಲಿ ಜಾಗರೂಕತೆ ಗೊಂಡಿರುವವರು. ವಿದ್ವಾಂಸರಾಗಿರುವರು. ಗೊಂಡಿದ ಜ್ಞಾನದ ಬೆಳಕನ್ನು ತೋರುವವರಲ್ಲ. ವ್ಯಯದ ಚಂದ್ರನವರು ಯಾರೊಡನೆಯೂ ಕಟ್ಟುಬೀಳುವವರಲ್ಲ. ಮನಸ್ಸಿನಲ್ಲಿರುವುದನ್ನು ಬೇಗನೆ ಹೇಳುವವರಲ್ಲ. ತಮಗೆ ವಿರುದ್ಧವಾಗಿ ಮಾತನಾಡಿದಾಗ ನಕ್ಕು ಸಂದರ್ಭ ಹೊಂದಿ ಉತ್ತರಿಸುವರು ಸಿಟ್ಟನ್ನು ಮರೆಸಿ ಮಾತನಾಡುವವರು ಕಾಣುವರು.

## ಜನ್ಮನಕ್ಷತ್ರ ತಿಥಿ ವಿಚಾರ

ಅಶ್ವಿನೀ ಮಘಾ ಮೂಲಾ ಈ ಮೂರು ನಕ್ಷತ್ರಗಳ ಆದಿಯ ಎರಡು ಘಟಿ, ಆಶ್ಲೇಷಾ ಜ್ಯೇಷ್ಠಾ ರೇವತೀ ಈ ಮೂರು ನಕ್ಷತ್ರಗಳ ಅಂತ್ಯದ ಎರಡು ಘಟಿ ನಕ್ಷತ್ರ ಗಂಡಾಂತದವು. ಕರ್ಕಟಕ ವೃಶ್ಚಿಕ ಮೀನ ಈ ಮೂರು ರಾಶಿ ಲಗ್ನಗಳ ಅರ್ಧಘಟಿ ಮೇಷ ಸಿಂಹ ಧನು ಈ ರಾಶಿಗಳ ಆದಿಯ ಅರ್ಧಘಟಿ, ಪಾಡ್ಯ, (ಪ್ರತಿಪತ್) ಷಷ್ಠಿ, ಏಕಾದಶಿ ತಿಥಿಗಳ ಆದಿಯ ಒಂದು ಘಟಿ, ಪಂಚಮಿ ದಶಮಿ, ಪಂಚದಶೀ ಇವುಗಳ ಅಂತ್ಯದ ಒಂದು ಘಟಿ ಪಂಚದಶೀ ಪೂರ್ಣಿಮಾ ಅಮಾವಾಸ್ಯಾ ತಿಥಿಗಳು. ಇವುಗಳ ಕೊನೆಯ ಒಂದು ಘಟಿ ತಿಥಿ ಗಂಡಾಂತ ದೋಷದವು.

ವಿವಾಹ, ಜನ್ಮ, ಪ್ರವಾಸ (ಯಾತ್ರೆ) ಗಳಲ್ಲಿ ಈ ಗಂಡಾಂತ ಅಶುಭ. ಚಂದ್ರ ಬಲಿಷ್ಠನಾಗಿದ್ದರೆ ತಿಥಿ ಗಂಡಾಂತ ದೋಷವಿಲ್ಲ ಗುರು ಬಲಿಷ್ಠನಾಗಿದ್ದರೆ ಲಗ್ನ ಗಂಡಾಂತ ದೋಷವಿಲ್ಲ ಎಂಬುದನ್ನು ಮುಹೂರ್ತ ಚಿಂತಾಮಣಿ ಕಾರನು ಈ ಕೆಳಗಿನ ಪದ್ಯದಲ್ಲಿ ಹೇಳಿರುವುದನ್ನು ಕಾಣಬಹುದು.

ಜ್ಯೇಷ್ಠಾಪೌಷ್ಣಭಸಾರ್ಪಭಾಂತ್ಯಘಟಿಕಾ ಯುಗ್ಮಂಚ ಮೂಲಾಶ್ವಿನೀಪಿತ್ರ್ಯಾದೌ-
ಘಟಿಕಾದ್ವಯಂನಿಗದಿತಂತದ್ಭಸ್ಯ ಗಂಡಾಂತಕಮ್ ।
ಕರ್ಕಾಲ್ಯಂಡಜಭಾಂತತೋಽರ್ಧಘಟಿಕಾಸಿಂಹಾಶ್ವಮೇಷಾದಿಗಾಪೂರ್ಣಾಂತೇಘಟಿ-
ಕಾತ್ಮಕಂತ್ವಶುಭದಂನಂದಾತಿಥೇಶ್ಚಾದಿವಮ್ ॥ (ಮುಹೂರ್ತ ಚಿಂತಾಮಣಿ)

ಉಷ್ಣಾಕರತ್ರಯತ್ರಿತೀಷು ಗಂಡಾಂತಾನಿಧನಪ್ರದಮ್ ॥ (ಕಶ್ಯಪ)

ಮೂಲಾ ಜನ್ಮ ನಕ್ಷತ್ರ ವಿಚಾರದಲ್ಲಿ ಮಾತ್ರವಲ್ಲದೆ ವಿಶಾಖಾ ಜ್ಯೇಷ್ಠಾ ನಕ್ಷತ್ರ ದೋಷ ವಿಷಯದಲ್ಲೂ ನಮ್ಮ ಪೂರ್ವಜರು ಪರಿಶೋಧನಾತ್ಮಕವಾದ ವಿವರ ಕೊಟ್ಟಿರುವರು.

ಕೃಷ್ಣೇ ತೃತೀಯಾ ದಶಮೀ ವಲಕ್ಷ್ಮೇ ಭೂತೋ ಮಹೀ ಜಾರ್ಕಿಬುಧ್ಯೈಃ ಸಮೇತಃ
ಚೇತ್ಸ್ಮೃತ್ಯಂತಾತ್ಃ ಶಿಶುಮಸ್ಯ ಮೂಲಮತ್ರುನ್ಮೂಲನಂತತ್ಕುರುತೇಕುಲಸ್ಯ ॥
(ಜಾತಕಾಭರಣ ನಕ್ಷತ್ರ ಪ್ರಕರಣ 26ನೇ ಪದ್ಯ)

ಜನನ ಕೃಷ್ಣಪಕ್ಷದ ತದಿಗೆ ಕುಜವಾರ, ಕೃಷ್ಣಪಕ್ಷದ ದಶಮಿ ಶನಿವಾರ, ಶುಕ್ಲಪಕ್ಷದ ಚತುರ್ದಶಿ ಬುಧವಾರಗಳಾಗಿ ಮೂಲಾ ನಕ್ಷತ್ರವಾದರೆ ಕುಲಕ್ಕೆ ಹಾನಿಕೊಡುವುದು ಎಂದು ಸಾರ. ಇದರೊಂದಿಗೆ ವೃಕ್ಷದೇವತಾದಿ ವಿಚಾರವನ್ನೂ ವಿಸ್ತಾರವಾಗಿ ಕೊಡಲಾಗಿದೆ.

ಕನ್ಯಾ ಜನ್ಮ ನಕ್ಷತ್ರ ವಿಷಯದಲ್ಲಿ ಮೂಲಾ, ಆಶ್ಲೇಷಾ, ವಿಶಾಖಾ, ಜ್ಯೇಷ್ಠಾ ಎಂದು ಹೇಳಿದಾಗ ಈ ಮೂಲಾ ನಕ್ಷತ್ರ ವಿಚಾರದೊಂದಿಗೆ ಪೂರ್ವಾಚಾರ್ಯ ಪುರುಷರ ಅನುಜ್ಞಾವಚನಗಳನ್ನು ಮಾನಿಸಬೇಕಾಗಿದೆ.

ಮಂದಾಶ್ಲೇಷಾಂ ವಿವರ್ಜಯೇತ್ ವಿಶಾಖಾ ತುಲಯಾಯುಕ್ತಾ ದೇವರಸ್ಯ ಶುಭಾವಹಾ ।
ವಿಶಾಖಾ ವೃಶ್ಚಿಕೋದ್ಭೂತಾ ದೇವರಂ ಹತ್ಯಸಂಶಯಮ್ ॥ (ವಿವಾಹಸಾರ)

ಶನಿವಾರ ಆಶ್ಲೇಷಾ ನಕ್ಷತ್ರದಲ್ಲಿ ಜನನವಾದರೆ ವರ್ಜ್ಯ. ವಿಶಾಖಾ ನಕ್ಷತ್ರದಲ್ಲಿ ಆದಿಯ ಮೂರು ಚರಣ ತುಲಾರಾಶಿ. ನಾಲ್ಕನೆ ಚರಣ ವೃಶ್ಚಿಕ ರಾಶಿ ತುಲಾರಾಶಿಯ ವಿಶಾಖಾ ದೇವರನಿಗೆ ಶುಭ. ವೃಶ್ಚಿಕ ರಾಶಿಯ ವಿಶಾಖಾ ನಕ್ಷತ್ರ ದೇವರನಿಗೆ ಕೆಡುಕಿನದ್ದು ಎಂದು ತಿಳಿಯಬೇಕಿದೆ.

ಜ್ಯೇಷ್ಠಾಂತ್ಯ ಪಾದಜೋಹಂತಿ ಬಾಲೋ ನ ಬಾಲಿಕಾ ॥ (ಮಾಧವೀಯ)

ಜ್ಯೇಷ್ಠಾಂತ್ಯಪಾದದ ಬಾಲಕನಿಂದ ಹಾನಿ. ಬಾಲಿಕೆಯಿಂದ ಹಾನಿ ಇಲ್ಲ. ತ್ರಿಜ್ಯೇಷ್ಠ ಚೆನ್ನಲ್ಲವೆಂದು ಕೆಲವರ ಮತ. ಜ್ಯೇಷ್ಠಾ ನಕ್ಷತ್ರ ಜ್ಯೇಷ್ಠಪುತ್ರ ಯಾ ಪುತ್ರಿ. ಜ್ಯೇಷ್ಠಮಾಸ ಹೀಗೆ ಆದರೆ ತ್ರಿಜ್ಯೇಷ್ಠ

ಯುಕ್ತದೋಷೋಪಯುಕ್ತಸ್ಯ ಭಾವನಾಥೇಸ್ತ್ವಶುಭಃ ನಕ್ಷತ್ರ ನಾಮ್ನೋಽಸ್ತಿ...
ಯುಕ್ತದೋಷೋ ನ ಸಂಶಯಃ ।
ಮೂಲಾಶಪೂರ್ವದ್ವಯ ರೌಕ್ಷ್ಯಂ ನ ಸ್ಯಾತ್ಪಿತ್ರಾದಯೋ ಗ್ರಹಾಃ ।
ಉಕ್ತಸ್ಥಾನಸ್ಥಿತಾ ಸ್ವಸ್ವಸ್ಯಾದೃಷ್ಟ್ಯಾಶ್ಚ ಬಲಿನೋ ಯದಿ ।
ಭಾವೇ ಭಾವಾಧಿಪೇ ಚೈವ ಚಂದ್ರೇ ಚ ಬಲಶಾಲಿನಃ । ಉಕ್ತ ದೋಷಾವಿನಶ್ಯಂತಿ
ಶುಭಗ್ರಹಯುತೇಕ್ಷಿತೇ ॥ (ವಿವಾಹಸಾರ)

ನಕ್ಷತ್ರ ದೋಷ ಜನನದ್ದು ಕಂಡಲ್ಲಿ ಈ ನಕ್ಷತ್ರ ಯಾವ ಫಲವಿಲ್ಲದು ವುದು ಎಂದು ಕಂಡು ಕೊಳ್ಳಬೇಕು. ತಥಾವಾಧಿಪ ಅಸ್ತ(ಮೌಢ್ಯ) ನೀಚ ರಾಶಿಯಲ್ಲಿದ್ದರೆ ಅಥವಾ ಷಷ್ಠ ಅಷ್ಟಮ ದ್ವಾದಶದಲ್ಲಿದ್ದರೆ ನಕ್ಷತ್ರ ದೋಷವಿರುವುದಿಲ್ಲ. ಪಿತೃಕಾರಕ ಸೂರ್ಯ ಪಿತೃಸ್ಥಾನ ದಶಮ. ಸೂರ್ಯ ಮತ್ತು ದಶಮ ಬಲದಿಂದ ಕೂಡಿ ಶುಭ ಗ್ರಹ ಯುತ ದೃಷ್ಟಿ ಇದ್ದಲ್ಲಿ ಮೂಲಾ ನಕ್ಷತ್ರ ಸಂಬಂಧ ದೋಷ (ವರನ ಗ್ರಹ ಕುಂಡಲಿ) ಹೋಗುವುದು. ಆಶ್ಲೇಷಾ ನಕ್ಷತ್ರವಾದಲ್ಲಿ ಚತುರ್ಥಸ್ಥಾನ ಯಾ ಶುಕ್ರ ಪ್ರಬಲವಿದ್ದಾಗಲೂ ಶುಭ ಗ್ರಹರಯುತ ದೃಷ್ಟಿಗಳಿದ್ದಲ್ಲಿ ಈ ನಕ್ಷತ್ರದೋಷ ಇರುವುದಿಲ್ಲ. ವಿಶಾಖಾ ನಕ್ಷತ್ರವಾದಾಗ ತೃತೀಯೈಕಾದಶ ಸ್ಥಾನ ಪ್ರಬಲವಾಗಿದ್ದರೆ ಜ್ಯೇಷ್ಠಾ ವಿಶಾಖಾ ನಕ್ಷತ್ರದೋಷ ಫಲವಿರುವುದಿಲ್ಲ. ಕನ್ಯಾ ಗ್ರಹ ಕುಂಡಲಿಯಲ್ಲಿ ಪಿತೃಮಾತೃ ಸ್ಥಾನ ಮತ್ತು ತತ್ಕಾರಕ ಗ್ರಹರು ಬಲಿಷ್ಠರಾಗಿ ಭಾವಾಧಿಪ ತನ್ನ ಭಾವದಲ್ಲಿದ್ದರೆ ಮತ್ತು ಚಂದ್ರ ಬಲದಿಂದ ಕೂಡಿ ಪಿತೃಮಾತೃ ಕಾ ಗ್ರಹರು ಶುಭ ಗ್ರಹಯುತರಾಗಿ ಯಾ ದೃಷ್ಟರಾಗಿದ್ದರೆ ಮೂಲಾದಿ ನಕ್ಷತ್ರ ದೋಷ ವಿನಾಶವಾಗುತ್ತದೆ ಎಂದು ಸಾರ.

ಸೂರ್ಯನ ಸ್ಪುಟದಿಂದ ಮಹಾನಕ್ಷತ್ರ ಚಂದ್ರ ಸ್ಪುಟದಿಂದ ದಿನ ನಕ್ಷತ್ರ ಗಣನೆ. ಚಂದ್ರ ಸ್ಪುಟದಿಂದ ಸೂರ್ಯ ಸ್ಪುಟವನ್ನು ಕಳೆದಾಗ (ತಿಥಿ ರರ್ಕಹೀನಃ) ತಿಥಿಸ್ಪುಟವಾಗುವುದು. ಹೀಗೆ ತಿಥಿಯ ಸಾಧನೆ. ಸಿದ್ಧಾಂತ ಶಿರೋಮಣಿಯಲ್ಲಿ ಭಾಸ್ಕರಾಚಾರ್ಯರು ಈ ಕೆಳಗಿನಂತೆ ಹೇಳಿರುವರು.

ಶಶಿತನುವಿಕಲಾಭ್ಯಶ್ಚಂದ್ರ ಭುಕ್ತ್ಯೇಂದು ಭಾಸ್ವೋರ್ಗತಿವಿವರಕಲಾಭಿರ್ಭಯಾ
ವಿವಾಭಿರೇವ ।
ಪೃಥಗತ ಗತಿಪುಣ್ಯಾ ನಾಡಿಕಾಃ ಸಂಧಿರಾಪ್ತಾ ಭತಿಥಿಕರಣ ಯೋಗಾನಾಂ ಫಲಂ
ತತ್ರ ಮಿಶ್ರನಮ್ ॥

ಸೂರ್ಯನ ಸುತ್ತುವರಿವ ಭೂಮಿ ಇದೆ. ಚಂದ್ರನೂ ಭೂಮಿಯು ಸುತ್ತುಗೊಳ್ಳುತ್ತಿರುವನು. ಚಂದ್ರನ ಸುತ್ತುವರಿಯುವಿಕೆಯಿಂದ ಹೊಂದುವುದು ತಿಥಿ. ಈ ತಿಥಿಯಾದ ಬಳಿಕ ಕರಣಯೋಗಗಳಾಗುವವು. ಚಂದ್ರ ಸ್ಫುಟಕ್ಕೆ ಸೂರ್ಯ ಸ್ಫುಟ ಸೇರಿಸಿದಲ್ಲಿ ಯೋಗ ಸ್ಫುಟ. ಚಂದ್ರ ಸ್ಫುಟದಿಂದ ಸೂರ್ಯ ಸ್ಫುಟ ಕಳೆದಾಗ ತಿಥಿಸ್ಫುಟ. ತಿಥಿಯ ಅರ್ಧ ಕರಣ ಇದನ್ನೇ "ಯೋಗೋರ್ಕಯುಕ್ತ: ತಿಥಿರರ್ಕಹೀನ: । ತಿಥ್ಯರ್ಧಂಕರಣಂ ಪ್ರೋಕ್ತಂ" ಎಂಬೀ ವಚನದಿಂದ ಉಪದೇಶಿಸಿರುವರು. ಅಮಾವಾಸ್ಯಾ ಜನನ ವಿಷಯದಲ್ಲಿ ಮೂರು ವಿಭಾಗ ಗೊಂಡಿರುವರು. ದರ್ಶ, ಸಿನೀವಾಲೀ, ಕುಹೂ ಎಂಬ ಇದನ್ನೇ. ದರ್ಶಸೂರ್ಯೇಂದು ಸಂಗಮಃ ಸಾದೃಷ್ಟೇಂದು ಸಿನೀವಾಲೀ ಸಾನಷ್ಟೇಂದು ಕಲಾಕುಹೂಃ। ಸಿನೀವಾಲಿ ದೃಷ್ಟ ಚಂದ್ರಯೋಗ ಕುಹೂ ನಷ್ಟೇಂದು ಕಲೆಯದು, ದರ್ಶ ಅದರ್ಶನದ ನೆಲೆ. ಅಮಾವಾಸ್ಯಾ ಭೇದದಿಂದ ಸಿನೀವಾಲೀ, ಕುಹೂ, ದರ್ಶ, ರೂಪತ್ರಯ ಭೇದ. ಸಿನೀವಾಲಿ "ದೃಷ್ಟೇಂದು" ಎಂದು ಹೇಳಿದ್ದರಿಂದ ಚತುರ್ದಶಿ ಸಂಬಂಧದವ. ಈ ಸಂಬಂಧಗಳಲ್ಲಿ ನಕ್ಷತ್ರದ ವಿಷ ಘಟಿ ಇದ್ದಲ್ಲಿ ಮಾತ್ರ ಅನಿಷ್ಟವೆಂದು ಗ್ರಂಥಕಾರರು ಹೇಳಿರುವರು.

ನಕ್ಷತ್ರೇಯಸ್ಯದರ್ಶಾಂತೋ ವಿಷನಾಡ್ಯಾ ಭವೇದ್ಯದಿ ।
ಕುಹೂಯೋಗ ಇತಿಖ್ಯಾತೋ ವ್ಯಾಧಿಮೃತ್ಯು ಭಯಾದಿಕೃತ್ ॥

ಯಾವ ಜನ್ಮನಕ್ಷತ್ರವೆಂದು ಕಂಡು ಆ ನಕ್ಷತ್ರದ ವಿಷಗಳಿಗೆಯ ಕಾಲದಲ್ಲಿ ದರ್ಶ ಕುಹೂ ಯೋಗವಾದಲ್ಲಿ ತಿಥಿದೋಷ ಫಲ. ಅನ್ಯಕಾಲದ ಜನನದಿಂದ ತಿಥಿ ದೋಷವಾಗುವುದಿಲ್ಲವೆಂದುತಿಳಿಯಬರುವುದು. ಆದ್ದರಿಂದ ವಿಷಘಟೀಕಾಲದ ಜನನ ಮಾತ್ರ ದೋಷಯುಕ್ತವೆಂದು ಮೂಹೂರ್ತ ಗ್ರಂಥಕಾರರು ಹೇಳಿದ್ದನ್ನು ಸಂಗ್ರಹಿಸಲಾಗಿದೆ.

## ದಶಾ ಫಲ

ಚಂದ್ರ ದಶಾಫಲವನ್ನು ಚಿಂತಿಸುವಾಗ ಶನಿಯ ಸ್ಥಿತಿಯನ್ನು ಕಾಣಬೇಕು. ಜನನ ಕಾಲದ ಚಂದ್ರನಿಂದ ಐದು ಒಂಬತ್ತು ಸಮಸಪ್ತಕ, ಅನ್ಯ ಕೇಂದ್ರ, ದ್ವಿದ್ವಾದಶ ಶನಿ ಇದ್ದಲ್ಲಿ ಆ ಚಂದ್ರದಶೆ ಚೆನ್ನಾಗಿರುವುದಿಲ್ಲ ದಶಾ

ಭುಕ್ತಿಗಳಲ್ಲಿ ಮಿತ್ರಕ್ಷೇತ್ರ ಉಚ್ಚ ಉಪಚಯ ತ್ರಿಕೋಣ ಸಪ್ತಮದ ಸಂಬಂಧ ಚಂದ್ರನಿಗಿದ್ದರೆ ಸತ್ಫಲ. "ಮಿತ್ರೋಚ್ಚೋಪಚಯ ತ್ರಿಕೋಣ ಮದಗಃ ಚಂದ್ರಸತ್ಫಲ ಬೋಧನಾನಿಕುರುತೇ" ಎಂಬ ಆಚಾರ್ಯ ಪುರುಷವರಾಹನ ಮಾತಿನಿಂದ ಹೊಂದಲಾಗಿದೆ. ಚಂದ್ರಾದಶಾ ಫಲ ವಿಚಾರದಲ್ಲಿ

> ಆದೌ ಭಾವಫಲಂ ಮಧ್ಯೇರಾಶಿ ಸ್ಥಾನ ಫಲಂವಿದುಃ ।
> ಪಾಕಾವಸಾನ ಸಮಯೇ ಚಾಂಗಜಂ ದೃಷ್ಟಿಜಂ ಫಲವ್ ॥

ಚಂದ್ರದಶೆಯ ಆದಿಭಾಗದಲ್ಲಿ ಭಾವಜನ್ಯ ಫಲ. ಮಧ್ಯಭಾಗದಲ್ಲಿ ರಾಶಿಜನ್ಯ ಫಲ. ಅಂತ್ಯಭಾಗದಲ್ಲಿ ದೃಷ್ಟಿಜನ್ಯ ಮತ್ತು ಯಾವ ರಾಶಿಯಲ್ಲಿ ರುವನೋ ತದ್ಬೋಧಕ ಅಂಗ ಅವಯವ ಫಲ ಎಂದು ಸಾರ. ಚಂದ್ರ ಲಗ್ನ ಪಂಚಮ ನವಮ ದಶಮ ಏಕಾದಶಗತನು ಸಾಧಾರಣ ಒಳ್ಳೆಯ ಫಲ ಕೊಡು ವನು. ದ್ವಿತೀಯ ತೃತೀಯ ಚತುರ್ಥ ವ್ಯಯದವ ಮಧ್ಯಮ ಫಲದವನು. ಕೆಲವರು ಈ ಕಾಲದಲ್ಲಿ ಅನ್ಯ ಸ್ತ್ರೀ ಸುಖಕ್ಕಾಗಿ ಧನ ವ್ಯಯಗೊಳ್ಳುವರು. ಷಷ್ಠ ಸಪ್ತಮದ ಚಂದ್ರನಿಂದ ಅನ್ಯ ವಿವಾಹ ಸಂಬಂಧವಾಗುವುದು. ಗೋಚ ರದಿಂದ ಶುಭಾ ಶುಭಫಲಗಳು ದಶಾಭುಕ್ತಿನಾಥರದ್ದು ಹೊಂದುವ ಕಾಲವನ್ನು "ಪ್ರಥಮಾಯ ಬಂಧು ನಿಧನ ದ್ಯಾಜ್ಞಾತಪೋದ್ಯಾನಗಃ" ಜನನ ಕಾಲದ ಗ್ರಹ ಸ್ಥಿತಿಯನ್ನು ಕಂಡು ಒಂದು, ಎರಡು, ನಾಲ್ಕು, ಏಳು, ಎಂಟು, ಒಂ ಭತ್ತು, ಹನ್ನೊಂದು ಈ ಸ್ಥಾನಗಳಲ್ಲಿ ಗೋಚರದಿಂದ ಬಂದಾಗ ಎಂದೂ ತಿಳಿ ಯಬೇಕಿದೆ. ಈ ಗ್ರಹರು ಮಾನವನಲ್ಲಿ ಪಂಚ ಭೂತಗಳ ಛಾಯೆಯ ನ್ನುಂಟು ಮಾಡುವರು. ಇದಕ್ಕೆ ದಶಾಕಾಲವನ್ನು ತಿಳಿಯಬೇಕು ಎಂದು ಆದೇಶಿಸಿರುವರು. ಪೃಥಿವಿ ಅಪ್ ತೇಜೋವಾಯು ಆಕಾಶ ಎಂಬ ಪಂಚ ಭೂತಗಳಿವೆ. ಕುಜ ಅಗ್ನಿ. ಬುಧ ಭೂಮಿ, ಗುರು ಆಕಾಶ, ಶುಕ್ರ ಜಲ, ಶನಿ ವಾಯುಭೂತ ಗ್ರಹರು. ಇದನ್ನೇ "ಶಿಖಿಭೂಖಪಯೋಮರುದ್ಗಣಾ ನಾಂ ವಶಿನೋಭೂಮಿಸುತಾದಯಃ ಕ್ರಮೇಣ" ಎಂಬೀ ಆಚಾರ್ಯ ಪುರುಷ ವರಾಹ ವಚನದಿಂದ ತಿಳಿಯುವೆವು. ರವಿತೇಜೋಭೂತ ಚಂದ್ರ ಜಲಭೂತ ಎಂದೂ("ವಹ್ನ್ಯಂಭ್ವಗ್ನಿಜ")ಎಂದಾರಂಭಿಸುವ ವಚನದಿಂದ ಹೊಂದುವೆವು ಈ ಪಂಚಭೂತಾತ್ಮಕರಾದ ಗ್ರಹರ ಗುಣ ಪರಿಣಾಮ ಪಂಚೇಂದ್ರಿಯಗಳಲ್ಲಾಗು

...ಸ್ವ ಎಂದರೋಣಸ್ವಂಬ್ವಗ್ನಿವಾಯ್ವಂಬರಜಾನ್ ಗುಣಾಂಶ್ಚ ನಾಸಾಸ್ಯದೃಕ್ತ್ವ ಕ್ಛ್ರವಣಾನುಮೇಯಾನ್" ಭೂಗುಣ ನಾಸಿಕದಿಂದ(ಮೂಗಿನಿಂದ) ಜಲಗುಣ ನಾಲಿಗೆಯಿಂದ, ತೇಜೋಗುಣ ಕಣ್ಣಿನಿಂದ, ವಾಯುಗುಣ ಚರ್ಮದಿಂದ, ಆಕಾಶ ಗುಣ ಕಿವಿಯಿಂದ ಅನುಭವಿಸ ತಕ್ಕದಾಗಿದೆ ಎಂದೂ ಫಲಬೋಧನೆಗೊಳಿಸುವರು. ದಶಾಫಲ ಚಿಂತನೆಯಲ್ಲಿ ಗ್ರಹರು ನೆಲಸಿದ ಭಾವ ಸಂಬಂಧಾದಿಗಳನ್ನು ಕಾಣಬೇಕು. ಇದರ ಬಳಿಕ ಅವರಿಗೆ ನೋಡುವ ಮತ್ತು ಯುತರಾದ ಗ್ರಹರನ್ನೂ ಕಾಣಬೇಕು. ನೋಡುವ ಮತ್ತು ಯುತ ಗ್ರಹರ ಪರಿಣಾಮ ಉಂಟಾಗುತ್ತದೆ. ಈ ಫಲ ಬೋಧನೆಯ ಮಾರ್ಗದಲ್ಲಿ ಎರಡು ಮೂರು ಪ್ರಮಾಣಗಳನ್ನು ಹೊಂದಿ ಅಧಿಕವಾದುದು ಯಾವುದೋ ಅದನ್ನೇ ಆದೇಶಿಸಬೇಕೆಂದೂ ಆಚಾರ್ಯ ಪುರುಷರ ಅನುಜ್ಞೆ. ಪರಾಶರ ಹೋರೆ, ಜಾತಕ ಪಾರಿಜಾತ, ಸರ್ವಾರ್ಥ ಚಿಂತಾಮಣಿ ಸಾರಾವಲೀ ಮಾನಸಸಾಗರೀ ಶಂಭು ಹೋರಾದಿ ಗ್ರಂಥಗಳಲ್ಲಿ ದಶಾಫಲ ವಿವರಣೆಗಳು, ಕಾಣ ತಕ್ಕವಾಗಿವೆ



## –ಒಪ್ಪೋಲೆ–

| ಪುಟ | ಗೆರೆ | ತಪ್ಪು | ಒಪ್ಪು |
|---|---|---|---|
| 3 | 9 | ಬಳೆಯುಲು | ಕಳೆಯುಲು |
| 5 | 5 | ಉದಸಿದಾಗ | ಉದಿಸಿದಾಗ |
| 5 | 13 | ಸಂಪ್ರಚುಕ್ಷತೇ | ಸಂಪ್ರಚಕ್ಷತೇ |
| 5 | 18 | ಎಂದು | ಎಂದ |
| 6 | 11 | ಕಾರಕರು | ಕಾರರು |
| 7 | 17 | ಶುದ್ಧವಾಗಿರದೇ | ಶುದ್ಧವಾಗಿರದೆ |
| 8 | 1 | ಈ ಈ | ಈ |
| 15 | 13 | ಪ್ರತ್ಯಗ್ದಿಕೆ • | ಪ್ರತ್ಯಗ್ದಿಕ್ |
| 15 | 14 | ದೋರ್ವ್ಯಾರ್ಘಯು: | ದೋರ್ವ್ಯಾರ್ಘಯು |
| 16 | 5 | ಸ್ಪಟಕ | ಸ್ಪಟಿಕ |
| 19 | 5 | Productions | Production |
| 23 | 23 | ಯುಃಕ್ಷರ್ಗಾಃ | ಯುಕ್ಷರ್ಗಾಃ |
| 23 | 25 | ಶತಾಂಕ | ಶತಾಂಕಃ |
| 24 | 17 | ಬರುವುದಲ್ಲದೇ | ಬರುವುದಲ್ಲದೆ |
| 26 | 5 | ಚಂದ್ರುನು | — |
| 27 | 8 | ರುರಗ | ರುಗಪಿ |
| 27 | 9 | ಗಜ್ಜೇ | ಗೇಜ್ಜೇ |
| 27 | 13 | ಬಾಲಗ್ರುಹಾನ್ | ಬಾಲಗ್ರಹಾತ್ |
| 27 | 20 | ದೇವತಾಕೋವ | ದೇವತಾಕೋಪ |
| 28 | 2 | ವೃತ್ತನು | ವೃತ್ತತನು |
| 30 | 1 | ಬಳಿ | ಬಿಳಿ |
| 30 | 12 | pulen | pulent and |
| 30 | 21 | When | When Well |
| 31 | 4 | DEggarly | Beggarly |
| 34 | 6 | ಸಸ್ಮರನ್ | ಸಂಸ್ಮರನ್ |

| | | | |
|---|---|---|---|
| 34 | 22 | ಭೋಕ್ತೃವು | ಭೋಕ್ತೃವು |
| 36 | ನಂ32 | ಗೋಷ್ಠಿ-ಸಭೆ ಗೊಂಡಿರುವಿಕೆ | ಯೋಧನಂ ಯುದ್ಧ ಗೊಂಡಿರುವಿಕೆ |
| 39 | 23 | ಚೆನ್ನಾಗಿರುಪದು | ಚೆನ್ನಾಗಿರುವುದು |
| 43 | 14 | ಸನ್ಯಾಸಿ | ಸಂನ್ಯಾಸಿ |
| 44 | 17 | ದಯಾನೀಯಾ | ದಯನೀಯ |
| 49 | 3 | ಭೋಗಕ್ಕಾಗಿಯೆ | ಭೋಗಕ್ಕಾಗಿಯೇ |
| 56 | 5 | ನಡಿ | ನಡೆ |
| 56 | 10 | ವಿರಕ್ತಿಯು | ವಿರಕ್ತಿ |
| 56 | 15 | ಅಲ್ಪಪ್ರಸವ | ಅಲ್ಪಪ್ರಸವ |
| 56 | 23 | ಪಿಂಡಪ್ರಕೃತಿಯು | ಪಿತೃಪ್ರಕೃತಿಯು |
| 57 | 26 | ಅಧಿಕಾರಸಕ್ತಿಯು | ಅಧಿಕಾರಾಸಕ್ತಿಯು |
| 63 | 12 | ಭಾವನೇಯಿರದ | ಭಾವನೆಯು |
| 79 | 26 | ವಿಷಾದಗಳಿರುತ್ತಡೆ | ವಿಷಾದಗಳಿರುತ್ತವೆ |
| 81 | 25 | ಹೋದ | ಹೊಸ |
| 83 | 1 | ಮುಕರಾಶಿ | ಮಕರ |
| 100 | 3 | ನಾಲ್ಕರ | ನಾಲ್ಕರಲ್ಲಿ |
| 105 | 17 | ಷಷ್ಠೆಚಂದ್ರೇ | ಷಷ್ಠೇಚಂದ್ರೇ |
| 110 | 5 | ಲುಬ್ಧ | ಲುಬ್ಧ |
| 110 | 9 | ಕುಲಾಸ್ | ಕುಲಾಠ್ |
| 119 | 2 | ಸಿದ್ಧಿಗೊಳ್ಳುವಿಕೆ ಯಾದನೂ | ಸಿದ್ಧಿಗೊಳ್ಳುವಿಕೆಯುವನೂ |
| 119 | 12 | ಜುಲ್ಬಂ | ಮುಲ್ಬಂ |
| 120 | 6 | ಚಂದ್ರು | ಚಂದ್ರುನವರು |
| 122 | 25 | ಪುರುಷರ | ಪುರುಷ |
| 123 | ಗ್ರುಹಚಕ್ರ | ಕುಂಭಕೇತು 10 | ಮಕರಕೇತು 10 |
| 125 | 10 | ರಿ:ಪೇ | ರಿ:ಫೇ |
| 127 | 19 | ಘಟಿ ತಿಥಿ | ಘಟಿರಾಶಿ ತಿಥಿ |

# ಜ್ಯೋತಿಷ ಬೋಧಿನಿ

## ಉತ್ತಮ ಪ್ರಾಥಮಿಕ ಜ್ಯೋತಿಷ ಗ್ರಂಥ

ಗ್ರಹರಾಶಿ ಸಂಬಂಧ, ನಕ್ಷತ್ರ ವಿಚಾರ, ರಾಶಿ-ಗುಣಧರ್ಮ, ಸೌರ ವ್ಯೂಹ, ಗ್ರಹ-ಕಾರಕತ್ವ, ಸ್ವರೂಪ, ಬಲ, ರೋಗವಿಚಾರ, ದೃಷ್ಟಿ, ಮಿತ್ರತ್ವ, ಶತ್ರುತ್ವ, ದಶವರ್ಗ, ಅವಸ್ಥಾಫಲ, ಭಾವ, ಭಾವಫಲ, ದ್ರೇಕ್ಕಾಣ, ರಾಶಿಸ್ಥಿತ-ಗ್ರಹಫಲ, ಉಪಗ್ರಹ, ಗುಳಿಕ-ಮಾಂದಿ, ದ್ವಿಗ್ರಹಯೋಗ, ಕರ್ಮ,ಅಥವಾ ವೃತ್ತಿ, ದಶಾಫಲ, ಬಾಧಕ ಸ್ಥಾನ, ಯೋಗಗಳು, ಗೋಚರ ಫಲ, ಅಷ್ಟಕವರ್ಗಪದ್ಧತಿ, ಪ್ರಶ್ನಶಾಸ್ತ್ರ ವಿಚಾರ ಇತ್ಯಾದಿ ಉಪಯುಕ್ತ ಹಾಗೂ ಬೋಧಪ್ರದ ಪ್ರಾರಂಭಿಕ ಪಾಠಗಳಿಂದ ಕೂಡಿದ ಈ ಜ್ಯೋತಿಷ **ಬೋಧಿನಿ** ಗ್ರಂಥವು ಶಾಸ್ತ್ರಜ್ಞಾನ ಪ್ರವೇಶಕ್ಕೆ ಸಹಾಯಕ ಆಗಿರುತ್ತದೆ.

**135 ಪುಟಗಳು** **ಬೆಲೆ ರೂ. 10**

# ಮೇಷ ಲಗ್ನ

ಮೇಷಲಗ್ನದಲ್ಲಿ ಜನಿಸಿದವರ ಗುಣಾವಗುಣ, ಸ್ವಭಾವ, ಗ್ರಹಸ್ಥಿತಿಯಿಂದ ಲಭಿಸುವ ಫಲಾಫಲಗಳು, ಲಗ್ನಫಲ, ದ್ರೇಕ್ಕಾಣಫಲ ಮತ್ತು ನವಾಂಶಫಲ, ಭಾವಸ್ಥಿತ ಗ್ರಹಫಲ, ಗ್ರಹಗಳ ಕಾರಕತ್ವ, ಪ್ರಾಮುಖ್ಯಯೋಗಗಳು, ರಾಜಯೋಗ, ಗ್ರಹಯುತಿ ಮತ್ತು ಪರಿವರ್ತನ ಯೋಗಫಲ, ಐದು ಮಾದರಿ ಜಾತಕಗಳಿಂದ ಕೂಡಿದ ಜ್ಯೋತಿಷ ಗ್ರಂಥ.

**102 ಪುಟಗಳು** **ಬೆಲೆ ರೂ.2-25**

# ಗುಳಿಕ ಅಥವಾ ಮಾಂದಿ ಮತ್ತು ಉಪಗ್ರಹಗಳು

ಗುಳಿಕ ಸ್ವರೂಪ, ಗುಳಿಕ ಶೋಧನೆ, ಭಾವಸ್ಥಿತ ಮಾಂದಿ ಫಲ, ಉಪಗ್ರಹಗಳು, ಲಗ್ನಸ್ಪುಟ, ಉಪಗ್ರಹಶೋಧನೆ, ಆರೂಢಪದ, ಆತ್ಮಕಾರಕಗ್ರಹ, ಕಾರಕಗ್ರಹಫಲ ಇತ್ಯಾದಿ ವಿವರ ಪ್ರಾಚೀನ ಮುನಿಪ್ರಣೀತ ಆಧಾರಶ್ಲೋಕ ಮತ್ತು ಅನುಭವಸಿದ್ಧ ಮತಗಳಿಂದ ಕೂಡಿದ ಉಪಯುಕ್ತ ಜ್ಯೋತಿಷಗ್ರಂಥ

**107 ಪುಟಗಳು** **ಬೆಲೆ ರೂ. 3 00**